Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications on objections are received within the specified date the Court will proceeded further in the matter.

Commissioner for workmen's
Compensation, Bidar.

PR-1175

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ ಜಿಲ್ಲೆ, ಕೊಪ್ಪಳ**

**ಕಾಅಕೊ/ಕಾನಪ/ಮ.ಪ್ರ/ಸಂಖ್ಯೆ–148/2009, ದಿನಾಂಕ:24ನೇ ಅಕ್ಟೋಬರ್, 2009**

**ಅರ್ಜಿದಾರರು:**

1) ಶ್ರೀಮತಿ ಗಾಯತ್ರಿ ಗಂಡ: ಲೇಟ್ ಗಾದಿಲಿಂಗಪ್ಪ, 20 ವರ್ಷ (ಮೃತನ ಹೆಂಡತಿ)

2) ಸಿದ್ದವ್ವ ಗಂಡ ಲೇಟ್ ರೇವಣ್ಣ, 40 ವರ್ಷ (ಮೃತನ ತಾಯಿ), ವಾಸ: ಗಾದಿಗನೂರು, ಹೊಸಪೇಟೆ (ತಾ), ಹಾಲಿವಾಸ: ಕಿನ್ನಾಳ ಗ್ರಾಮ, ಜಿ:ಕೊಪ್ಪಳ.

**ಪ್ರತಿವಾದಿಗಳು:**

1) ಶ್ರೀಮತಿ ನೆಲ್ಲುಡಿ ಬಸಮ್ಮ ಗಂಡ: ಎನ್. ಪಂಪಣ್ಣ, ಟ್ರಾಕ್ಟರ್ ಮಾಲೀಕರು, ಟ್ರಾಕ್ಟರ್ ನಂ.ಕೆಎ–35/ಟಿ–4057, ಟ್ರಾಲಿ ನಂ.ಕೆಎ–35/ಟಿ–4058, ವಾಸ: ಗಾದಿಗನೂರು, ತಾ:ಹೊಸಪೇಟೆ.

2) ವ್ಯವಸ್ಥಾಪಕರು, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ ಲಿಮಿಟೆಡ್ ಡಿವಿಜನಲ್ ಆಫೀಸ್, ಯಲಮಾಂಚಲಿ ಕಾಂಪ್ಲೆಕ್ಸ್, 1ನೇ ಮಹಡಿ, ಸ್ಟೇಷನ್ ರೋಡ್, ಹೊಸಪೇಟೆ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಗಾದಿಲಿಂಗಪ್ಪ ರವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:21.09.2008 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ, ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ: ಗಾದಿಲಿಂಗಪ್ಪ ಇವರ ವಾರಸುದಾರರಾದ ಶ್ರೀಮತಿ ಗಾಯತ್ರಿ ಗಂಡ ಲೇಟ್ ಗಾದಿಲಿಂಗಪ್ಪ (ಮೃತನ ಹೆಂಡತಿ) ಹಾಗೂ ಸಿದ್ದವ್ವ ಗಂಡ ಲೇಟ್ ರೇವಣ್ಣ (ಮೃತನ ತಾಯಿ) ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್.1180

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ: ಡಬ್ಲ್ಯೂಸಿಎ/ಎಫ್/ಎಸ್ಆರ್–19/2010, ದಿನಾಂಕ:**

**ಅರ್ಜಿದಾರರು:**

1) ಶ್ರೀಮತಿ ಸುಜಾತ ಕೋಂ ಲೇ: ಪರಮೇಶ್

2) ಎಂ.ಪಿ. ಕಾವ್ಯ ಬಿನ್ ಲೇ: ಪರಮೇಶ್

3) ಎಂ.ಪಿ. ರಾಮ್ ಪ್ರಸಾದ್ ಬಿನ್ ಲೇ: ಪರಮೇಶ್

4) ಅಣ್ಣೇಗೌಡ ಬಿನ್ ಸಣ್ಣ ದೊಡ್ಡೇಗೌಡ,

ಕೇರಾಫ್ ಹೆಚ್.ಎಸ್. ರಾಜಪ್ಪ, ಎಲ್ಲೂರು, ಗುಡ್ಡೇನಹಳ್ಳಿ ಕೊಪ್ಪಲು, ಕಂದಲಿ ಅಂಚೆ, ಹಾಸನ ತಾಲ್ಲೂಕು.

**ಪ್ರತಿವಾದಿಗಳು:**

1) ಎ.ಆರ್. ಕುಮಾರ್ ಬಿನ್ ರಂಗೇಗೌಡ ಅಂಕಪುರ ಗ್ರಾಮ, ಕಟ್ಟಾಯ ಹೋಬಳಿ, ಹಾಸನ ತಾಲ್ಲೂಕು.

2) ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪೆನಿ ಲಿಮಿಟೆಡ್ ಹರ್ಷಮಹಲ್ ರಸ್ತೆ, ಹಾಸನ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ರಘು, ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:03.04.2010 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್. ಗುರುಪ್ರಸಾದ್**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

ಪಿ.ಆರ್.1181

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ–3, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು–560 029**

**ಪ್ರಕರಣ ಸಂಖ್ಯೆ:ಸಿಡಬ್ಲ್ಯೂಸಿ:ಎಫ್‌ಸಿ/ಸಿಆರ್–21/10, ದಿನಾಂಕ:26ನೇ ಜುಲೈ, 2010**

| **ಅರ್ಜಿದಾರರು:** | **ಪ್ರತಿವಾದಿಗಳು:** |
|---|---|
| 1) ಶ್ರೀ ಅಲ್ಲು ಭಗತ್<br>2) ಶ್ರೀಮತಿ ದೇವಂತಿದೇವಿ<br>ಪುಂಜಾವರ ವ್ಹಿಲೇಜ್ ಪೋಸ್ಟ್, ಜಿ:ಸಿವೋನ್, ಬಿಹಾರ, Now at ಬೆಂಗಳೂರು. | 1) ಮೆ॥ ಪ್ರೊಪ್ರೈಟರ್ ಪ್ರೈಮವೇರಾ ಪ್ರೋಜೆಕ್ಟ್ ಎನ್–ಕನ್ಸ್ಟ್ರಕ್ಷನ್ ಲಿ., ಬೆಂಗಳೂರು<br>2) ಮೆ॥ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಬೆಂಗಳೂರು. |

**ಪ್ರಕಟಣೆ**

ಅರ್ಜಿದಾರರಾದ ಶ್ರೀ ಅಲ್ಲುಭಗತ್ ಮತ್ತು ಶ್ರೀಮತಿ ದೇವಂತಿದೇವಿ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಶ್ರೀ ಥೋಟನ್‌ಭಗತ್ ಇವರು ಪ್ರತಿವಾದಿ 1 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದೇನೆಂದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ–3, ಬೆಂಗಳೂರು.

ಪಿ.ಆರ್.1182

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ–1/2009,**

| **ಅರ್ಜಿದಾರರು:** | **ಪ್ರತಿವಾದಿಗಳು:** |
|---|---|
| 1) Smt. Shanthamma K. W/o Late: K.M. Balasubramnyam | 1) Mr. R. Ashok Kumar Reddy S/o R. Chinnasha Reddy R/o Door No.17-67 Tavali Street, Palamaner- AP-517408. |

2) Sri Lokeshwara K. S/o Late: K.M. Balasubramnyam
3) Rajesh K. S/o Late: K.M. Balasubramnyam
4) K.M. Munirathnam S/o Muniswamy, All are Residing at 2nd Cross Kuruberpet, Kolar.

2) the New India Assurance Co.Ltd., Branch Office Bangalure Manssion, 2nd Floor Doddapet, Kolar-563101.

**ಅಧಿಸೂಚನೆ**

ಅರ್ಜಿದಾರರಾದ Smt. Shanthamma K. ಅವರು ತಮ್ಮ ಗಂಡ Late: K.M. Balasubramnyam ಅವರು 1ನೇ ಪ್ರತಿವಾದಿ Mr. R. Ashok Kumar ರವರ ಬಳಿ ಚಾಲಕ: ಕ್ಲೀನರ್: ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ:20/21.08.2008 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ, ಈ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸಲಾಗುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ:15.07.2010ರಂದು ನೀಡಲಾಗಿದೆ.

**ಎಸ್. ರೇವಣ್ಣ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು, ಕೋಲಾರ
ಉಪವಿಭಾಗ, ಕೋಲಾರ.

ಪಿ.ಆರ್.1183

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ, ಸಾಗರ**

**ಅಧಿಸೂಚನೆ ಸಂ: ಬಿ3:ಅಮೊ.ವಾಹನ.19/10–11, ದಿನಾಂಕ1ನೇ ಜುಲೈ, 2010**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡ ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1. | ಟಾಟಾ ಸುಮೋ ಕೆಎ–03–ಬಿ–9183 | ಅರಣ್ಯ ಸಂಚಾರಿದಳ, ಶಿಕಾರಿಪುರ ಇವರ ಕಛೇರಿ ಅ.ಮೊ. ಸಂ:02/2010–11 ದಿ:09–04–2010 | 483-DL-51 BUZ-704313 | 446252-B4-2908535 |
| 2. | ಮಾರುತಿ ವ್ಯಾನ್ ಸಿಕೆಡಿ–725 | ಶಿರಾಳಕೊಪ್ಪ ವಲಯದ ಅ.ಮೊ. ಸಂ:02/10–11 ದಿ:05–04–2010 | Not Visible | Not Visible |
| 3. | ಟಾಟಾ ಸುಮೋ ಕೆಎ–17–ಎನ್–6910 | ಶಿಕಾರಿಪುರ ವಲಯದ ಅ.ಮೊ. ಸಂ:02/2010–11 ದಿ:16–04–2010 | 254701153815 | 385003080911618 |
| 4. | ಲಗೇಜ್ ಆಟೋ ಕೆಎ–15–4883 | ಅಂಬ್ಲಿಗೊಳ ವಲಯದ ಅ.ಮೊ. ಸಂ:24/2010–11 ದಿ:31–05–2010 | BBM-BPG-18215 | MD-2-ALAL-22 PUC-12199 |

| ಕ್ರ. ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 5. | ಟಾಟಾ ಏಸ್ ಕೆಎ–27–ಎ–4419 | ಅನವಟ್ಟಿ ವಲಯದ ಅ.ಮೊ. ಸಂ: 31/2010–11 ದಿ:05–06–2010 | 275 IDLO 5A52 507326 | 44 5010 ASZ-RO 8750 |
| 6. | ಮಾರುತಿ ವ್ಯಾನ್ ಜೆಎ–01–ಎನ್–0462 | ಅಂಬ್ಲಿಗೊಳ ವಲಯದ ಅ.ಮೊ. ಸಂ:32/10–11 ದಿ:22–06–2010 | Not Visible | Not Visible |
| 7. | ಮಾರುತಿ ವ್ಯಾನ್ ಜಿಎ–01–ಆರ್–4330 | ಅಂಬ್ಲಿಗೊಳ ವಲಯದ ಅ.ಮೊ. ಸಂ:34/10–11 ದಿ:29–06–2010 | Not Visible | ST-91-IN-960665 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾದ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಣೆ ಮಾಡಲು ಉಪಯೋಗಿಸಿದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಮನೋಜ್ ಕುಮಾರ್ ತ್ರಿಪಾಠಿ**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.1036

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–27/06–07, ದಿನಾಂಕ:17ನೇ ಜುಲೈ, 2010**

**ಉಪಸ್ಥಿತರು:** ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಣ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು :** ವಲಯ ಅರಣ್ಯಾಧಿಕಾರಿ,
ಸಾಗರ ವಲಯ, ಸಾಗರ. (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಭಾದ್ಯತೆದಾರರು :** ಶ್ರೀ ಪ್ರವೀಣ್ ಬಿನ್ ದೇವಪ್ಪ ಗೌಡ ಎಂ.ಎನ್.,
ಕೇಸ್ತೂರು ವಾಸಿ, ದೂರ್ವಾಸಪುರಂ ಅಂಚೆ, ತೀರ್ಥಹಳ್ಳಿ ತಾಲ್ಲೂಕು.
(ಮಾನ್ಯ ಶ್ರೀ ಕೆ.ಎನ್.ಶ್ರೀಧರ, ವಕೀಲರು, ಸಾಗರ)

**ಪ್ರಸ್ತಾವನೆ:**

ದಿನಾಂಕ:02–03–2007 ರಂದು ವಲಯ ಅರಣ್ಯಾಧಿಕಾರಿ, ಸಾಗರ ಇವರಿಗೆ ಮಾರುತಿ ಓಮ್ನಿಯಲ್ಲಿ ನಾಟಾ ಸಾಗಾಣಿಕೆಯಾಗುತ್ತಿದೆಂದು ಬಂದ ಖಚಿತ ವರ್ತಮಾನದ ಮೇರೆಗೆ ಶಿರುವಂತೆ ಶಾಖೆಯ ವನಪಾಲಕರು ಮತ್ತು ಅರಣ್ಯ ರಕ್ಷಕರು ಸೇರಿ ಸಾಗರ ತಾಲ್ಲೂಕು ಪವಿತ್ರವನದ ಎದುರು ಭಾಗದ ಸಾಗರದಿಂದ ಕರ್ಕಿಕೊಪ್ಪಕ್ಕೆ ಹೋಗುವ ರಸ್ತೆಯಲ್ಲಿ ಕಾಯುತ್ತಿರುವಾಗ ಕರ್ಕಿಕೊಪ್ಪ ಕಡೆಯಿಂದ ಒಂದು ವಾಹನ ಸಂಜೆ 7–00 ಗಂಟೆ ಸಮಯದಲ್ಲಿ ಬರುತ್ತಿರುವುದನ್ನು ನಿಲ್ಲಿಸಲು ರಸ್ತೆಗೆ ಅಡ್ಡವಾಗಿ ಕಲ್ಲುಗಳಿನ್ನಿಟ್ಟು ಬ್ಯಾಟರಿ ಬೆಳಕಿನಿಂದ ವಾಹನ ನಿಲ್ಲಿಸಿ, ಇಲಾಖಾ ಸಿಬ್ಬಂದಿಯವರು ವಾಹನ ಸುತ್ತುವರಿದಾಗ

ಒಬ್ಬನು ಓಡಿಹೋದದ್ದನ್ನು ವಾಹನ ಚಾಲಕನನ್ನು ಹಿಡಿಯಲಾಯಿತು. ವಾಹನದೊಳಗೆ ಬ್ಯಾಟರಿ ಬೆಳಕಿನಿಂದ ನೋಡಲಾಗಿ ಕೆಲವು ಮರದ ತುಂಡುಗಳಿದ್ದು, ಅವುಗಳನ್ನು ನಾಡ ಗರಗಸದಿಂದ ಕೊಯ್ದು ಒರಟು ಕೆತ್ತನೆಯ ತುಂಡುಗಳಾಗಿದ್ದು, ಈ ತುಂಡುಗಳ ತುದಿ ಬುಡದಲ್ಲಿ ಇಲಾಖೆಯ ಯಾವುದೇ ಛಾಪಾದ ಗುರುತಿರಲಿಲ್ಲ. ವಾಹನ ಚಾಲಕನನ್ನು ವಿಚಾರಿಸಿದಾಗ ಅವನ ಬಳಿ ರಹದಾರಿ ಇರಲಿಲ್ಲವೆಂದು ಪ್ರಸನ್ನ ಬಿನ್ ದೇವಪ್ಪಗೌಡ, 23 ವರ್ಷ, ಕೆಸ್ತೂರು ವಾಸಿ, ದೂರ್ವಾಸಪುರ ಅಂಚೆ, ತೀರ್ಥಹಳ್ಳಿ ತಾಲ್ಲೂಕು ಎಂದು ತಿಳಿಸಿದ ಮೇರೆಗೆ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಬೀಟೆ ತುಂಡುಗಳನ್ನು ಕಾರಿನಿಂದ ಕೆಳಗಿಳಿಸಿ, ಎಣಿಸಿ ಸಂಖ್ಯೆಕೊಟ್ಟು, ಅಳತೆ ಮಾಡಿ 10=0.504 ಎಂ3 ಇದ್ದು, ಅವುಗಳಿಗೆ ಅಮಾನತ್ತು ಛಾಪಾ KNFDG-E6E ಗುರುತು ಹೊಡೆದು ಅರಣ್ಯ ಮೊಕದ್ದಮೆ ಸಂಖ್ಯೆ: 137/06–07ನ್ನು ಕೆಂಪು ಬಣ್ಣದಿಂದ ಬರೆದು ವಾಹನ ಮಾರುತಿ ಓಮ್ನಿ ಕೆಎ–03–ಎನ್–6975, ಛಾಸಿಸ್ಸ ನಂ: 158425, ಇಂಜಿನ್ ನಂ: 1332355 ಇದ್ದು, ಕರ್ನಾಟಕ ಕಾಯಿದೆ 1963 ಸೆಕ್ಷನ್ 62, 71(ಎ,104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಪ್ರಥಮ ವರ್ತಮಾನ ವರದಿ, ಮಹಜರ್ ಕ್ರಮ, ಜಪ್ತು ವರದಿಯೊಂದಿಗೆ ಕೇಸು ದಾಖಲಿಸಿ ನಂತರ ಆಸಾಮಿಯನ್ನು ಜೆ.ಎಂ.ಎಫ್.ಸಿ. ಸಾಗರಕ್ಕೂ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷೆತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುರ್ಪಧಿಗೆ ಕೊಡಲು ಈ ನ್ಯಾಯಾಲಯದಿಂದ ದಿ:05–03–2007 ರಂದು ಆದೇಶವಾಗಿದೆ.

ನಂತರ ಈ ವಾಹನವನ್ನು ಮಧ್ಯಂತರ ಅವಧಿಗೆ ಬಿಟ್ಟುಕೊಡಲು ದಿ:05–04–2007 ರಂದು ಮನವಿಯನ್ನು ಶ್ರೀ ಕೆ.ಎನ್.ಶ್ರೀಧರ್ ವಕೀಲರು, ಸಾಗರ ಇವರ ವಕಾಲತನಾಮದೊಂದಿಗೆ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ನಂತರ ಇವರ ಅರ್ಜಿಯನ್ನು ದಿ:28–02–2009 ರಂದು ತಿರಸ್ಕರಿಸಿ ಆದೇಶವಾಗಿದೆ.

ನಂತರ ಈ ಪ್ರಕರಣದಲ್ಲಿ ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ಎಸ್.ಎಸ್.ಚಂದ್ರಶೇಖರ, ವಲಯ ಅರಣ್ಯಾಧಿಕಾರಿ, ಆನೇಕಲ ವಲಯ, ಇವರು ದಿ:01–08–2009ರಂದು ಕರೆಸಿ ಹೇಳಿಕೆ ಪಡೆಯಲಾಯಿತು. ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ "ನಾನು 2005 ರಿಂದ 2008 ರವರೆಗೆ ಸಾಗರ ವಲಯದ ವಲಯ ಅರಣ್ಯಾಧಿಕಾರಿಯಾಗಿ, ಕರ್ತವ್ಯ ನಿರ್ವಹಿಸುತ್ತಿದ್ದೆ. ದಿ:02–03–2007 ರಂದು ಸಂಜೆ 6–00 ಗಂಟೆ ಸಮಯದಲ್ಲಿ ದೂರವಾಣಿ ಮೂಲಕ ಬಂದ ವರ್ತಮಾನದ ಮೇರೆಗೆ ಸಿಬ್ಬಂದಿಗಳೊಂದಿಗೆ ಪವಿತ್ರವನದ ಎದುರು ಕರ್ಕಿಕೊಪ್ಪ ರಸ್ತೆಯಲ್ಲಿ ಒಂದು ಮಾರುತಿ ಓಮ್ನಿ ಕರ್ಕಿಕೊಪ್ಪ ಕಡೆಯಿಂದ ಬರುತ್ತಿದ್ದು, ಅದನ್ನು ಬ್ಯಾಟರಿ ಸೂಚನೆ ಕೊಟ್ಟು ನಿಲ್ಲಿಸುವಂತೆ ಹೇಳಿದಾಗ ವಾಹನದಲ್ಲಿ ಇಬ್ಬರು ಇದ್ದು, ಒಬ್ಬ ಓಡಿಹೋದ ಚಾಲಕನನ್ನು ಹಿಡಿದುಕೊಂಡೆವು. ವಿಚಾರಿಸಿದಾಗ ಆತನ ಹೆಸರು ಪ್ರಸನ್ನ ಎಂದು ಓಡಿಹೋದವನು ಕೃಷ್ಣಮೂರ್ತಿ ಎಂದು ತಿಳಿಸಿದನು. ವಾಹನದಲ್ಲಿ ಒಟ್ಟು 10 ಬೀಟೆ ತುಂಡುಗಳಿದ್ದವು. ಅವುಗಳ ಮೇಲೆ ಇಲಾಖಾ ಯಾವುದೇ ಛಾಪಾ ಇರಲಿಲ್ಲ. ಅವು ಕೈ ಕೊಯ್ತದಿಂದ ಮಾಡಿದ ಒರಟು ಕೆತ್ತನೆಯಿಂದ ಕೂಡಿದ ತುಂಡುಗಳಾಗಿದ್ದುವು. ಅವುಗಳನ್ನು ಸಾಗಿಸಲು ರಹದಾರಿ ಇಲ್ಲ ಎಂದು ತಿಳಿಸಿದರು. ತುಂಡುಗಳನ್ನು ಅಳತೆ ಮಾಡಿ, ಕ್ರಮ ಸಂಖ್ಯೆ ಕೊಟ್ಟು, ಇಲಾಖಾ ಛಾಪಾ ಹೊಡೆದವು. ವಾಹನ ಮಾರುತಿ ಓಮ್ನಿ ಆಗಿದ್ದು, ಅದರ ಸಂಖ್ಯೆ: ಕೆಎ–03–ಎನ್–6975 ಆಗಿತ್ತು. ವಾಹನ ಮತ್ತು ತುಂಡುಗಳನ್ನು ಮಹಜರ್ ಮಾಡಿ ಅಮಾನತ್ತುಪಡಿಸಿಕೊಂಡೆವು. ಮಹಜರನ್ನು ನೋಡಿದ್ದು, ಅದನ್ನು ನಿಪಿ–1 ಎಂದು ನನ್ನ ಸಹಿಯನ್ನು ನಿಪಿ–1ಎ ಎಂದು ಗುರ್ತಿಸಿದೆ. ಕಛೇರಿಯನ್ನು ದೂರವಾಣಿ ಮೂಲಕ ಸಂಪರ್ಕಿಸಿ ಅರಣ್ಯ ಮೊಕದ್ದಮೆ ಸಂಖ್ಯೆ ಪಡೆದು ವಾಹನದ ಮೇಲೆ ನಮೂದಿಸಿದೆವು. ತುಂಡುಗಳು, ವಾಹನ, ಆರೋಪಿಯೊಂದಿಗೆ ಕಛೇರಿಗೆ ಬಂದು ಪ್ರಥಮ ವರ್ತಮಾನ ವರದಿಯನ್ನು ದಾಖಲಿಸಿದ್ದು, ಅದನ್ನು ನಿಪಿ–2 ಎಂದು ನನ್ನ ಸಹಿಯನ್ನು 2ಎ ಎಂದು ಗುರ್ತಿಸಿದೆ. ಜಪ್ತು ವರದಿಯನ್ನು ನಿಪಿ–3 ಎಂದು ನನ್ನ ಸಹಿಯನ್ನು ನಿಪಿ–3ಎ ಎಂದು ಗುರ್ತಿಸಿದೆ. ಆರೋಪಿಯನ್ನು ದಸ್ತಗಿರಿ ಮಾಡಿ ನ್ಯಾಯಾಲಯಕ್ಕೆ ಹಾಜರ್ಪಡಿಸಿದೆವು. ವಿಚಾರಣಾ ವರದಿ ತಯಾರಿಸಿದ್ದು, ತನಿಖೆಯನ್ನು ಪೂರೈಸಿ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಹ ಸಲ್ಲಿಸಿರುತ್ತೇನೆ. ವಿಚಾರಣಾ ವರದಿಯನ್ನು ನಿಪಿ–4 ಎಂದು ನನ್ನ ಸಹಿಯನ್ನು ನಿಪಿ–4ಎ ಎಂದು ಗುರ್ತಿಸಿದೆ. ತುಂಡು ಮತ್ತು ವಾಹನವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಆದೇಶದ ಮೇರೆಗೆ ಸರ್ಕಾರಿ ನಾಟಾ ಸಂಗ್ರಹಾಲಯಕ್ಕೆ ಸಾಗಿಸಿದೆವು. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಆದೇಶವನ್ನು ಗುರುತಿಸಿದ್ದು, ಅದನ್ನು ನಿಪಿ–5 ಎಂದು ಗುರ್ತಿಸಿದೆ".

ಪಾಟಿಸವಾಲು: ಕೆ.ಎನ್.ಎಸ್. ವಕೀಲರಿಂದ ಕರ್ತವ್ಯ ನಿರ್ವಹಿಸಿದ ಬಗ್ಗೆ ದಿನಚರಿಯಲ್ಲಿ ನಮೂದಿಸುತ್ತೇನೆ. ದಿ:02–03–2007ರಂದು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸಿರುತ್ತೇನೆ. ನಾನು ಫಾರೆಸ್ಟರ್, ಗಾರ್ಡ್ ಒಟ್ಟು 3 ಜನ ನನ್ನ ಸ್ವಂತ

ವಾಹನದಲ್ಲಿ 6–30 ಸಮಯದಲ್ಲಿ ಹೋಗಿದ್ದೆವು. ಸಾಗರದಿಂದ ವರದಹಳ್ಳಿಗೆ ಹೋಗುವ ರಸ್ತೆಯಲ್ಲಿರುವ ಪವಿತ್ರವನದ ಎದುರು ರಸ್ತೆಗೆ ಅಡ್ಡಲಾಗಿ ಕಲ್ಲುಗಳನ್ನು ಇಟ್ಟು ರಸ್ತೆ ಬದಿಯಲ್ಲಿ ಕಾಯುತ್ತಿದ್ದೆವು. ನನ್ನ ಮೊಬೈಲಿಗೆ ದೂರವಾಣಿ ಕರೆ ಬಂದಿತ್ತು.

ಸದರಿ ರಸ್ತೆಯಲ್ಲಿ ವಾಹನ ದಟ್ಟಣೆ ಕಡಿಮೆ ಇರುತ್ತದೆ. ನಾವು ರಸ್ತೆ ಪಕ್ಕದಲ್ಲಿ ಮರೆಯಲ್ಲಿ ನಿಂತು ಕಾಯುತ್ತಿದ್ದೆವು. ಸದರಿ ರಸ್ತೆ ನೇರವಾದ ರಸ್ತೆಯಾಗಿರುತ್ತದೆ. ಅಲ್ಲಿರುವ ಹಾಸ್ಪೆಲ್‌ನ ಬಲಗಡೆ ಭಾಗದಲ್ಲಿರುವ ಗಿಡಮರಗಳ ಬದಿಯಲ್ಲಿ ನಿಂತಿದ್ದೆವು. ಟಾರ್ಚ್ ಬೆಳಕಿನಿಂದ ವಾಹನ ನಿಲ್ಲಿಸಲು ಸೂಚನೆ ನೀಡಿದೆವು. ಮೂರು ಜನರಲ್ಲಿ ಯಾರು ಟಾರ್ಚ್ ಹೊಡೆದರೆಂದು ಗೊತ್ತಿಲ್ಲ. ಎಲ್ಲರೂ ಟಾರ್ಚ್ ಬೆಳಕು ಹೊಡೆದವು. ಓಡಿಹೋದವನ್ನು ಹಿಡಿಯಲು ಅವನ ಮನೆಯ ಬಳಿ ಬಹಳಷ್ಟು ಸಾರಿ ಹೋಗಿದ್ದು, ಅವನು ಸಿಗಲಿಲ್ಲ. ಅವನು ತುಂಬೆ ಗ್ರಾಮದ ಕೃಷ್ಣಮೂರ್ತಿ ಎಂಬುವವನಾಗಿದ್ದು, ಅವನಿಗೆ ಮನೆ ಇರುತ್ತದೆ. ದೋಷರೋಪಣಾ ಪಟ್ಟಿಯಲ್ಲಿ ಆತನನ್ನೂ ಸೇರಿಸಿದ್ದೇವೆ. 1ನೇ ಆರೋಪಿ ಬೇರೆ ಊರಿನವನಾಗಿದ್ದು, ಸಾಗರದಲ್ಲಿ ವಾಸವಿರುವುದಾಗಿ ತಿಳಿಸಿದನು. ವಾಹನದ ಮಾಲೀಕರು ಯಾರೆಂದು ಮಾಹಿತಿ ಸಿಕ್ಕಿರುವುದಿಲ್ಲ. ಮಾಲೀಕತ್ವದ ಬಗ್ಗೆ ಪತ್ರ ವ್ಯವಹಾರ ಮಾಡಿರುತ್ತೇವೆ. ಸದರಿ ವಾಹನವನ್ನು ಕೃಷ್ಣಮೂರ್ತಿ ಎಂಬುವರು ಸಾಗರದ ಪ್ರೇಕ್ಷಣೀಯ ಸ್ಥಳ ನೋಡಲು ಬಾಡಿಗೆಗೆ ತಂದಿದ್ದರು ಎಂದರೆ ಸರಿಯಲ್ಲ. ಪ್ರಸನ್ನ ವಾಹನದ ಚಾಲಕನಾಗಿರಲಿಲ್ಲ ಎಂದರೆ ಸರಿಯಲ್ಲ. ಕೃಷ್ಣಮೂರ್ತಿ ವರದಹಳ್ಳಿ ದೇವಸ್ಥಾನದ ಬಳಿ ನಿಲ್ಲಿಸಿದ್ದು, ಅದನ್ನು ನಾವು ತಂದಿದ್ದೇವೆಂದರೆ ಸರಿಯಲ್ಲ. ಅದರಲ್ಲಿ ತುಂಡುಗಳಿರಲಿಲ್ಲ ಎಂದರೆ ಸರಿಯಲ್ಲ. ಮೇಲಾಧಿಕಾರಿಗಳಿಗೆ ವರದಿ ಮಾಡುವ ಸಲುವಾಗಿ ನಿಂತಿದ್ದ ವಾಹನಕ್ಕೆ ತುಂಡುಗಳನ್ನು ಹಾಕಿ ಕೇಸು ದಾಖಲಿಸಿದ್ದೇನೆಂದರೆ ಸರಿಯಲ್ಲ. ಅಮಾನತ್ತು ಪಡಿಸಿದ ಬೀಟೆ ತುಂಡುಗಳನ್ನು ಎಲ್ಲಿಂದ ತಂದರು ಎಂಬ ಬಗ್ಗೆ ಹುಡುಕಿದ್ದು, ಬಡು ಪತ್ತೆಯಾಗಿರುವುದಿಲ್ಲ. ಸದರಿ ಪ್ರದೇಶದಲ್ಲಿ ಸಿಬ್ಬಂದಿಗಳು ಗಸ್ತು ಮಾಡುತ್ತಾರೆ. ಒಂದು ವೇಳೆ ಆ ಪ್ರದೇಶದಲ್ಲಿ ಮರ ಕಡಿತಲೆಯಾಗಿದ್ದರೆ, ಆ ಬಗ್ಗೆ ನಮಗೆ ಮಾಹಿತಿ ಸಿಗುತ್ತದೆ. ಆ ದಿವಸ ತುಂಬೆ ಅರಣ್ಯ ಪ್ರದೇಶದಲ್ಲಿ ಮರ ಕಡಿದಿರುವ ಬಗ್ಗೆ ಸಿಬ್ಬಂದಿಯಿಂದ ಯಾವುದೇ ಮಾಹಿತಿ ಬಂದಿರುವುದಿಲ್ಲ. ದೋಷಾರೋಪಣಾ ಪಟ್ಟಿ ಸಲ್ಲಿಸುವ ಪೂರ್ವದಲ್ಲಿ ತುಂಬೆ ವಲಯದಲ್ಲಿ ಬೀಟೆ ಮರ ಕಡಿದ ಬಗ್ಗೆ ಸಿಬ್ಬಂದಿಗಳಿಂದ ವರದಿ ಬಂದಿದೆ. ಇದನ್ನು ಆಧರಿಸಿ ತಪಾಸಣೆ ಮಾಡಿದಾಗ ಜಪ್ತು ಮಾಡಿದ ತುಂಡುಗಳು ಕೆತ್ತಿರುವುದರಿಂದ ಅದನ್ನು ತಾಳೆ ಮಾಡಲು ಸಾಧ್ಯವಾಗಿರುವುದಿಲ್ಲ. ಕಡಿದ ಮರವನ್ನು ಗರಗಸದಿಂದ ಕೊಯ್ತ ಮಾಡಿರುವುದು ಕಂಡುಬಂದಿರುತ್ತದೆ. ಪ್ರಸನ್ನನನ್ನು ಕರೆದುಕೊಂಡು ಹೋಗಿ ಮರ ಕಡಿಯಲು ಉಪಯೋಗಿಸಿದ ಉಪಕರಣಗಳನ್ನು ಹುಡುಕಲು ಪ್ರಯತ್ನಿಸಲಿಲ್ಲ. ತುಂಡುಗಳನ್ನು ತುಂಬಿದ ಜಾಗ ಬೆಳ್ಳೆಣ್ಣೆ ಬೀಟ್ ಅರಣ್ಯ ವ್ಯಾಪ್ತಿಯಲ್ಲಿ ಬರುತ್ತಿದ್ದು, ಅದನ್ನು ತೋರಿಸಿದನು. ಸದರಿ ಸ್ಥಳದಲ್ಲಿ ಮರಗಳನ್ನು ದಾಸ್ತಾನು ಮಾಡಿ, ತುಂಬಿದ ಬಗ್ಗೆ ಗುರುತು ಇತ್ತು. ಈ ಬಗ್ಗೆ ಯಾವುದೇ ಮಹಜರ್ ಬರೆದಿಲ್ಲ. ಪವಿತ್ರ ವನದ ಎದುರು ನಿಂತು ನಾವು ಮಹಜರ್ ಜರುಗಿಸಿದೆವು. ಸ್ಥಳೀಯರ ಸಹಿಯನ್ನು ಮಹಜರ್‌ನಲ್ಲಿ ತೆಗೆದಕೊಂಡಿರುವುದಿಲ್ಲ. ಪೂರ್ಣ ಪ್ರಕ್ರಿಯೆಯು 2–00 ಗಂಟೆಯಲ್ಲಿ ಮುಗಿದಿರುತ್ತದೆ. ಸದರಿ ಪ್ರದೇಶದಲ್ಲಿ ಕತ್ತಲಿತ್ತು. ಬೆಳ್ಳೆಣ್ಣೆ ಮೀಸಲು ಅರಣ್ಯದಲ್ಲಿ ಬೀಟೆ ಮರಗಳ ಬೆಳವಣಿಗೆ ಇಲ್ಲ ಎಂದರೆ ಸರಿಯಲ್ಲ. ನಾನು ತನಿಖೆ ನಡೆಸಿದ ಜಾಗ ಶಿರುವಂತೆ ಶಾಖೆಗೆ ಬರುತ್ತದೆ. ನಾವು ಜಪ್ತು ಮಾಡಿದ ತುಂಡುಗಳು ಅಂದಾಜು 17 ಅಡಿ ಇತ್ತು. ಸದರಿ ವಾಹನದ ಹಿಂಭಾಗದ ಸೀಟು ಇರಲಿಲ್ಲ. ಬದಲಾಗಿ ತುಂಡುಗಳನ್ನು ದಾಸ್ತಾನು ಮಾಡಿದ ಸ್ಥಳದಲ್ಲಿ ಚಕ್ಕೆ ಕೆತ್ತಿದ ಕುರುಹು ಕಂಡುಬಂದಿರುವುದಿಲ್ಲ. ಸದರಿ ತುಂಡುಗಳ ತೂಕದ ಬಗ್ಗೆ ನನಗೆ ಮಾಹಿತಿ ಇಲ್ಲ. ಸದರಿ ತುಂಡುಗಳ ಉದ್ದ ಮತ್ತು ದಪ್ಪವನ್ನು ಟೇಪಿನಿಂದ ಅಳತೆ ಮಾಡಿರುತ್ತೇವೆ. ಪವಿತ್ರ ವನದ ಸಿಬ್ಬಂದಿಗಳನ್ನು ಸಹಾಯಕರನ್ನಾಗಿ ತೆಗೆದುಕೊಂಡಿರುತ್ತೇವೆ. ವಾಹನದಿಂದ ಎಲ್ಲಾ ತುಂಡುಗಳನ್ನು ಕೆಳಗಿಳಿಸಿ ಅಳತೆ ಮಾಡಿರುತ್ತೇವೆ. ಮಹಜರ್ ಬರೆಯಲು ಪ್ರಾರಂಭಿಸಿ ತುಂಡುಗಳನ್ನು ಕೆಳಗಿಳಿಸಿ ಅಳತೆ ತೆಗೆದುಕೊಂಡು ನಮೂದಿಸಿರುತ್ತೇವೆ. ವಾಹನವನ್ನು ನಿಲ್ಲಿಸಿ ಅದರಲ್ಲಿ ಮರಗಳ ತುಂಡಗಳಿದ್ದ ಬಗ್ಗೆ ನಾವು ಗಮನಿಸಿದ್ದನ್ನು ಮಹಜರ್‌ನಲ್ಲಿ ಬರೆದಿಲ್ಲ ಎನ್ನುವುದು ಸರಿಯಲ್ಲ. ವಾಹನ ಖಾಲಿ ಇದ್ದು, ಇಲಾಖೆಯಲ್ಲಿರುವ ತುಂಡುಗಳನ್ನು ತುಂಬಿ ಅದರ ಮೇಲೆ ಕೇಸು ದಾಖಲಿಸಿರುತ್ತೇವೆ ಎಂದರೆ ಸರಿಯಲ್ಲ. ವಾಹನದ ಮಾಲೀಕರು ವಾಹನವನ್ನು ಬಾಡಿಗೆಗೆ ಕೊಟ್ಟಿದ್ದು, ಅಕ್ರಮ ಸಾಗಾಣಿಕೆ ಕೊಟ್ಟಿರುವುದಿಲ್ಲ ಎನ್ನುವುದು ನನಗೆ ಗೊತ್ತಿಲ್ಲ. ನನ್ನ ಮೇಲಿನ ಆರೋಪಗಳನ್ನು ತಪ್ಪಿಸಿಕೊಳ್ಳಲು ಕೇಸು ದಾಖಲಿಸಿದ್ದೇನೆಂದರೆ ಸರಿಯಲ್ಲ. ಮರು ವಿಚಾರಣೆ ಇರುವುದಿಲ್ಲ.

ಡಿಫೆನ್ಸ್ ಸಾಕ್ಷಿ ವಿಚಾರಣೆ ದಿ:26–09–2009, 21–11–2009ರಂದು 2 ಬಾರಿ ಕಾಲಾವಕಾಶ ನೀಡಿದೆ. ಸದರಿ ದಿನಾಂಕ:26–09–2009 ರಂದು ಡಿಫೆನ್ಸ್ ಕಡೆಯ ವಕೀಲರು ಹಾಜರಿದ್ದು, ಮುಂದಿನ ದಿನಾಂಕದಂದು ಡಿಫೆನ್ಸ್ ಸಾಕ್ಷಿ ವಿಚಾರಣೆ ಮಾಡಲು ಸಮಯ ಕೋರಿದಂತೆ ಕಾಲಾವಕಾಶ ನೀಡಿದ್ದರೂ ದಿ:21–11–2009ರಂದು ಡಿಫೆನ್ಸ್ ಕಡೆ ವಕೀಲರು ಗೈರು ಹಾಜರಾಗಿರುತ್ತಾರೆ. ಡಿಫೆನ್ಸ್ ಕಡೆ ವಾದವನ್ನು ಮಂಡಿಸಲು ದಿ:02–01–2010, 20–02–2010, 17–04–2010 ರಂದು

3 ಬಾರಿ ಕಾಲಾವಕಾಶ ನೀಡಿದ್ದರೂ. ಡಿಫೆನ್ಸ್ ಕಡೆಯಿಂದ ಆರ್.ಸಿ. ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ಹಾಜರಾಗಿರುವುದಿಲ್ಲ. ಇದರಿಂದ ಡಿಫೆನ್ಸ್ ಕಡೆಯ ವಾದ ಇಲ್ಲವೆಂದು ಪರಿಗಣಿಸಿದೆ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:17–04–2010ರಂದು ವಾದ ಮಂಡಿಸಿ, ದಿ:02–03–2007ರಂದು ಬೀಟೆ ನಾಟಾ ಅಕ್ರಮವಾಗಿ ವಾಹನದಲ್ಲಿ ಸಾಗಿಸುತ್ತಿರುವಾಗ ಆರೋಪಿಗಳ ಸಮೇತ ಇಲಾಖಾ ಪರ ವಶಪಡಿಸಿಕೊಂಡು ಕೇಸು ದಾಖಲಿಸಿ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯನ್ನು ಈ ನ್ಯಾಯಾಲಯಕ್ಕೆ ಸಾಕ್ಷಿಗಳ ಸಹಿಯೊಂದಿಗೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನವನ್ನು ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಿಸಲು ಬಳಸಿರುವುದು ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಾಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಮಾರುತಿ ವ್ಯಾನ್ ನೊಂದಣಿ ಸಂಖ್ಯೆ:KA-03-N-6975 ರಲ್ಲಿ ದಿನಾಂಕ:02–03–2007 ರಂದು ಬೀಟೆ ನಾಟಾ 10=0.504ಎಂ3 ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?
2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?
3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಮಾರುತಿ ವ್ಯಾನ್‌ನಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?
4. ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶದ ಮೊದಲ ಭಾಗಕ್ಕೆ ಹೌದು  ಎಂತಲೂ ಎರಡನೇ ಭಾಗಕ್ಕೆ ಇಲ್ಲ ಎಂಬುದಾಗಿರುತ್ತದೆ.

**ಅಂಶ–1:**

ದಿನಾಂಕ:02–03–2007ರಂದು ಸಾಗರ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಖಚಿತ ವರ್ತಮಾನದ ಮೇರೆಗೆ ಸಾಗರ ಟೌನ್ ಕರ್ಕಿಕೊಪ್ಪಕ್ಕೆ ಹೋಗುವ ರಸ್ತೆಯಲ್ಲಿ ಸಂಜೆ 7–00 ಗಂಟೆ ಸಮಯದಲ್ಲಿ ಗಸ್ತು ಕಾಯುತ್ತಿರುವಾಗ ಬೀಟೆ ನಾಟಾ ಅಕ್ರಮ ಸಾಗಾಣಿಯಲ್ಲಿ ತೊಡಗಿದ ಒಂದು ವಾಹನ ಬರುತ್ತಿರುವುದನ್ನು ಇಲಾಖಾ ಪರ ವಶಪಡಿಸಿಕೊಂಡು ಕೇಸು ದಾಖಲಿಸಿ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಹಾಜರ್ಪಡಿಸಿರುತ್ತಾರೆ. ಸಲ್ಲಿಸಿದ ದಾಖಲೆಗಳಿಗೂ ಮತ್ತು ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ತಾಳೆಯಾಗಿದ್ದು, ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆ ಎಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಪ್ರವೀಣ್ ಬಿನ್ ದೇವಪ್ಪ ಗೌಡ ಎಂ.ಎನ್. ಕೆಸ್ತೂರು ವಾಸಿ, ದೂರ್ವಾಸಪುರ ಅಂಚೆ, ತೀರ್ಥಹಳ್ಳಿ ತಾಲ್ಲೂಕು ಇವರು ದಿ:05–04–2007 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ

ಸಲ್ಲಿಸಿರುತ್ತಾರೆ. ಇವರ ಅರ್ಜಿಯಲ್ಲಿ ಮತ್ತು ಬಿ ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದ ವಿಳಾಸದಂತೆ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ)(1) ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:13–04–2007 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಆರ್.ಸಿ. ಮಾಲೀಕರು ಈ ವಾಹನವನ್ನು ಮಧ್ಯಂತರ ಸುಪರ್ಧಿಗೆ ಬಿಟ್ಟುಕೊಡಲು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯನ್ನು ದಿ:28–02–2009ರಂದು ತಿರಸ್ಕರಿಸಿ ಆದೇಶವಾಗಿದೆ. ಡಿಫೆನ್ಸ್ ಸಾಕ್ಷಿ ಹೇಳಿಕೆಗೆ 2 ಬಾರಿ ದಿನಾಂಕ ನೀಡಿರುತ್ತದೆ. ಮತ್ತು ಡಿಫೆನ್ಸ್ ಹೇಳಿಕೆ ನೀಡಲೂ ಮತ್ತು ವಾದ ಮಂಡಿಸಲು 3 ಬಾರಿ ಕಾಲಾವಕಾಶ ನೀಡಿದೆ. ಡಿಫೆನ್ಸ್ ಹೇಳಿಕೆ ನೀಡಲು ಮತ್ತು ವಾದ ಮಂಡಿಸಲು ಡಿಫೆನ್ಸ್ ಸಾಕ್ಷಿಯಾಗಲೀ, ವಕೀಲರಾಗಲೀ ಬಹಳ ಮುಂಚಿತವಾಗಿ ಪತ್ರದ ಮೂಲಕ ತಿಳಿಸಿದ್ದರು ಹಾಜರಾಗಿರುವುದಿಲ್ಲ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿನಾಂಕ:02–03–2007ರಂದು ಮಾರುತಿ ವ್ಯಾನ್‌ನಲ್ಲಿ ಬೀಟೆ ನಾಟಾ 10=0.504ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ ಸಾಗರ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಸಲ್ಲಿಸಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಆರ್.ಸಿ. ಮಾಲೀಕರು ದಿನಾಂಕ:05–04–2007 ರಂದು ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿದಂತೆ, ಈ ವಾಹನವನ್ನು ಜೋಗಫಾಲ್ಸ್ ಮತ್ತು ವರದಹಳ್ಳಿ ನೋಡಲು ತೆಗೆದುಕೊಂಡು ಹೋಗಿದೆಂದು, ಈ ವಾಹನದ ಮೇಲೆ ಅರಣ್ಯ ಇಲಾಖೆಯವರು ಸುಳ್ಳುಕೇಸು ದಾಖಲಿಸಿರುತ್ತಾರೆಂದು ತಿಳಿಸಿದಂತೆ ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದಿಲ್ಲ. ಅಲ್ಲದೇ ಯಾರೂ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ ಮುನ್ನೆಚ್ಚರಿಕೆ ಕ್ರಮ ಕೈಗೊಂಡಿರುವುದಿಲ್ಲ ಎಂಬುದು ನನ್ನ ಉತ್ತರವಾಗಿದೆ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿಯವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಸಾಗರ ಇವರು ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ನೊಂದಣಿ ಸಂಖ್ಯೆ:KA-15-N-6975 ಮತ್ತು ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತಾದ ಬೀಟೆ ನಾಟಾ 10=0.504 ಎಂ3ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ ಮಾರುತಿ ವ್ಯಾನ್ ನೊಂದಣಿ ಸಂಖ್ಯೆ:KA-03-N-6975 ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 10=0.504 ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:17–07–2010 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.1121

## ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

### ಅಧಿಸೂಚನೆ

**ಸಂಖ್ಯೆ: ವಾಕೈ 23 ಜಕೈಸೇ 2010, ಬೆಂಗಳೂರು, ದಿನಾಂಕ:28ನೇ ಜುಲೈ, 2010**

**ವಿಷಯ:** ಕೈಮಗ್ಗ ಮತ್ತು ಜವಳಿ ಇಲಾಖೆಯ ಸಹಾಯಕ ನಿರ್ದೇಶಕರ ಅಂತಿಮ ಜೇಷ್ಠತಾ ಪಟ್ಟಿ ಕುರಿತು.

ಕೈಮಗ್ಗ ಮತ್ತು ಜವಳಿ ಇಲಾಖೆಯ ಸಹಾಯಕ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿಯನ್ನು ದಿನಾಂಕ:01–01–2010 ರಲ್ಲಿದ್ದಂತೆ ದಿ:19–06–2010ರಂದು ಪ್ರಕಟಿಸಿ, ನಿಗಧಿ ಪಡಿಸಿರುವ ಜೇಷ್ಠತೆಗೆ ಸಂಬಂಧಿಸಿದಂತೆ ಬಾಧಿತ ಅಧಿಕಾರಿಗಳಿಂದ ಆಕ್ಷೇಪಣೆ/ಸಲಹೆಗಳಿದ್ದಲ್ಲಿ ಅವುಗಳನ್ನು ಸದರಿ ಅಧಿಸೂಚನೆ ಪ್ರಕಟಿಸಿದ 15 ದಿನಗಳ ಕಾಲಾವಕಾಶ ನೀಡಿ, ಕರೆಯಲಾಗಿತ್ತು. ಆದರೆ, ಈ ಬಗ್ಗೆ ಯಾವುದೇ ಆಕ್ಷೇಪಣೆ/ಸಲಹೆಗಳು ಬಾರದೇ ಇದ್ದುದರಿಂದ, ಸಹಾಯಕ ನಿರ್ದೇಶಕರ ವೃಂದದ ದಿ:01–01–2010ರಲ್ಲಿದ್ದಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಪ್ರಕಟಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಗಣಪತಿ**

ಸರ್ಕಾರದ ಉಪ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ದಿನಾಂಕ:01–01–2010ರಲ್ಲಿದ್ದಂತೆ ಕೈಮಗ್ಗ ಮತ್ತು ಜವಳಿ ಇಲಾಖೆಯ ಸಹಾಯಕ ನಿರ್ದೇಶಕರ ಅಂತಿಮ ಜೇಷ್ಠತಾ ಪಟ್ಟಿ**

**ವೇತನ ಶ್ರೇಣಿ ರೂ.12000–22650**

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀಯುತರಾದ | ನೇರ ನೇಮಕಾತಿ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯಲ್ಲಿ ಮುಂಬಡ್ತಿ/ ಹೊಂದಿದ ದಿನಾಂಕ | ಜೇಷ್ಠತೆಗೆ ಅರ್ಹತಾ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 1 | ಎಸ್.ಜಗದೀಶ್ | ಮುಂಬಡ್ತಿ | 10–01–1959 | 16–01–1986 | 06.02..2008 | 06.02..2008 | – |
| 2 | ಎಸ್.ಎಸ್.ಫಡಕೆ | ಮುಂಬಡ್ತಿ | 07–07–1963 | 16–01–1986 | 06.02..2008 | 06.02..2008 | – |
| 3 | ದಿನೇಶ್ ಕೆ ಹೆಬ್ಬಾರ್ | ಮುಂಬಡ್ತಿ | 30–10–1962 | 16–01–1986 | 06.02..2008 | 06.02..2008 | – |
| 4 | ವೈ.ಎನ್.ಹಾವರ್ಗಿ | ಮುಂಬಡ್ತಿ | 01–06–1962 | 16–01–1986 | 06.02..2008 | 06.02..2008 | – |
| 5 | ಎಂ.ಎಸ್.ಅತ್ತೀಮರದ್ | ಮುಂಬಡ್ತಿ | 25–05–1963 | 16–01–1986 | 06.02..2008 | 06.02..2008 | – |
| 6 | ಬಿ.ಆರ್.ಯೋಗಿಶ್ | ಮುಂಬಡ್ತಿ | 22–07–1967 | 22–11–1990 | 06.02..2008 | 06.02..2008 | – |
| 7 | ವೀರೇಶ್ ಎಸ್.ಧವಳೆ | ಮುಂಬಡ್ತಿ | 29–11– 1964 | 16–01–1986 | 05–05–2008 | 05–05–2008 | – |
| 8 | ಆರ್.ಲಿಂಗರಾಜು | ಮುಂಬಡ್ತಿ | 01–06–1965 | 16–01–1986 | 05–05–2008 | 05–05–2008 | – |
| 9 | ಸಿ.ರವಿಕುಮಾರ್ | ಮುಂಬಡ್ತಿ | 12–03–1965 | 01–09–1989 | 05–05–2008 | 05–05–2008 | – |
| 10 | ವಾಸುದೇವ ದೊಡ್ಡಮನಿ | ಮುಂಬಡ್ತಿ | 01–06–1966 | 18–12–1990 | 05–05–2008 | 05–05–2008 | – |
| 11 | ಎನ್.ಟಿ.ನೆಗಳೂರು | ಮುಂಬಡ್ತಿ | 01–06–1964 | 12–09–1988 | 27–02–2009 | 27–02–2009 | – |
| 12 | ಸಫಾರೆ ಶ್ರೀನಿವಾಸ | ಮುಂಬಡ್ತಿ | 01–06–1966 | 12–09–1988 | 27–02–2009 | 27–02–2009 | – |
| 13 | ಜನಾರ್ಧನ್ | ಮುಂಬಡ್ತಿ | 24–05–1964 | 12–09–1988 | 27–02–2009 | 27–02–2009 | – |
| 14 | ಗಂಗಯ್ಯ | ಮುಂಬಡ್ತಿ | 23–02–1963 | 28–11–1991 | 27–02–2009 | 27–02–2009 | – |

**ಎಂ.ಎಸ್. ಗಣಪತಿ**

ಪಿ.ಆರ್.1198

ಸರ್ಕಾರದ ಉಪ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಅಧಿಸೂಚನೆ

**ಸಂಖ್ಯೆ: ವಾಕೈ 12 ಜಕೈಸೇ 2010, ಬೆಂಗಳೂರು, ದಿನಾಂಕ:27ನೇ ಜುಲೈ, 2010**

**ವಿಷಯ:** ಕೈಮಗ್ಗ ಮತ್ತು ಜವಳಿ ಇಲಾಖೆಯ ಪ್ರವರ್ಧನಾಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿ ಬಗ್ಗೆ.

ಕೈಮಗ್ಗ ಮತ್ತು ಜವಳಿ ಇಲಾಖೆಯ ಜವಳಿ ಪ್ರವರ್ಧನಾಧಿಕಾರಿಗಳ ಕರಡು ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2010ರಲ್ಲಿದ್ದಂತೆ ತಯಾರಿಸಿ, ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ ಪ್ರಕಟಿಸಿದೆ. ಈ ಕುರಿತಂತೆ ಯಾವುದೇ ಆಕ್ಷೇಪಣೆ / ಸಲಹೆಗಳಿದ್ದಲ್ಲಿ ಅವುಗಳನ್ನು ಈ ಅಧಿಸೂಚನೆ ಪ್ರಕಟಿಸಿದ 15 ದಿನಗಳೊಳಗೆ ಸರ್ಕಾರದ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸ ಸೌಧ, ಬೆಂಗಳೂರು, ಇವರಿಗೆ ತಲುಪುವಂತೆ ಸಲ್ಲಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಗಣಪತಿ**

ಸರ್ಕಾರದ ಉಪ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಅನುಬಂಧ**

**ದಿನಾಂಕ:01.01.2010ಕ್ಕೆ ಅನ್ವಯಿಸುವಂತೆ ಕೈಮಗ್ಗ ಮತ್ತು ಜವಳಿ ಇಲಾಖೆಯ ಜವಳಿ ಪ್ರವರ್ಧನಾಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿ.**

**(ವೇತನ ಶ್ರೇಣಿ : ರೂ.10800–20025)**

| ಕ್ರಮ ಸಂಖ್ಯೆ | ನೌಕರರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯಲ್ಲಿ ಮುಂಬಡ್ತಿ/ ಸೇರಿದ ದಿನಾಂಕ | ಜೇಷ್ಠತೆಗೆ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 1 | ಜಿ.ಟಿ. ಕುಮಾರ್ | ಮುಂಬಡ್ತಿ | 27.07.1959 | 16.01.1986 | 03.01.2003 | 12.09.2001 | – |
| 2 | ಕೀರ್ತೆಪ್ಪ ಗೋಟೂರು | ಮುಂಬಡ್ತಿ | 05.05.1963 | 12.09.1988 | 03.01.2003 | 28.02.2008 | – |
| 3 | ಮಲ್ಲಪ್ಪ ಜಿ. ಕೊಣ್ಣೂರು | ಮುಂಬಡ್ತಿ | 01.04.1964 | 12.09.1988 | 03.01.2003 | 28.02.2008 | – |
| 4 | ಶಿವಕುಮಾರ್ | ಮುಂಬಡ್ತಿ | 20.06.1964 | 12.09.1988 | 03.01.2003 | 28.02.2008 | – |
| 5 | ಸುರೇಶ್ ಎನ್. ತಡಕನಹಳ್ಳಿ | ಮುಂಬಡ್ತಿ | 15.12.1962 | 12.09.1988 | 03.01.2003 | 28.02.2008 | – |
| 6 | ಕಾಶೀನಾಥ ಎಂ. ಭಾವಿಕಟ್ಟಿ | ಮುಂಬಡ್ತಿ | 15.07.1962 | 12.09.1988 | 02.04.2008 | 28.02.2008 | – |
| 7 | ಎಸ್.ಎಸ್. ಬೆನಕಲ್ | ಮುಂಬಡ್ತಿ | 01.06.1961 | 12.09.1988 | 28.02.2008 | 28.02.2008 | – |
| 8 | ಯೋಗೀಶ್ | ಮುಂಬಡ್ತಿ | 05.01.1964 | 12.09.1988 | 28.02.2008 | 28.02.2008 | – |
| 9 | ಬಿ.ಆರ್. ರಾಜ್‌ಕುಮಾರ್ | ಮುಂಬಡ್ತಿ | 06.01.1962 | 12.09.1988 | 29.12.2008 | 25.10.2008 | – |

| ಕ್ರಮ ಸಂಖ್ಯೆ | ನೌಕರರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯಲ್ಲಿ ಮುಂಬಡ್ತಿ/ ಸೇರಿದ ದಿನಾಂಕ | ಜೇಷ್ಠತೆಗೆ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 10 | ಎಸ್.ಐ. ಸಣಕಲ್ | ಮುಂಬಡ್ತಿ | 01.06.1964 | 12.09.1988 | 08.11.2008 | 25.10.2008 | – |
| 11 | ಎ. ಧರಣೇಶ್ | ಮುಂಬಡ್ತಿ | 15.07.1964 | 12.09.1988 | 20.11.2008 | 25.10.2008 | – |
| 12 | ಹೆಚ್.ಬಿ. ಪಾಟೀಲ್ | ಮುಂಬಡ್ತಿ | 01.05.1967 | 12.09.1988 | 03.11.2008 | 25.10.2008 | – |
| 13 | ಎನ್. ಶಶಿಧರ್ | ಮುಂಬಡ್ತಿ | 17.11.1967 | 12.09.1988 | 31.10.2008 | 25.10.2008 | – |
| 14 | ಪಿ.ಕೆ. ಪರಪ್ಪ | ಮುಂಬಡ್ತಿ | 18.10.1961 | 12.09.1988 | 30.10.2008 | 25.10.2008 | – |
| 15 | ಅಜಿತ್ ಜಿ. ನಾಯಕ್ | ಮುಂಬಡ್ತಿ | 22.07.1967 | 12.09.1988 | 12.02.2009 | 25.10.2008 | |

**ಎಂ.ಎಸ್. ಗಣಪತಿ**
ಸರ್ಕಾರದ ಉಪ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್.1190

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ,**
**ಉಪವಿಭಾಗ–2, ಚಿಕ್ಕಮಗಳೂರು ಜಿಲ್ಲೆ**
**ಸಂಖ್ಯೆ: ಕಾಪಕಾ:ಎಫ್:11/2008,**

**ಅರ್ಜಿದಾರರು:**

1) ಶ್ರೀಮತಿ ರತ್ನ ಕೋಂ ಶ್ರೀ ಲೇಟ್ ಮೋನಪ್ಪ
2) ಶ್ರೀ ಪ್ರೇಂ ಕುಮಾರ್ ಬಿನ್ ಶ್ರೀ ಲೇಟ್ ಮೋನಪ್ಪ
3) ಶ್ರೀ ಪ್ರವೀಣ್ ಕುಮಾರ್ ಬಿನ್ ಶ್ರೀ ಲೇಟ್ ಮೋನಪ್ಪ
ಕು: ಪ್ರಸಿಲ್ಲಾ ಡಾಟರ್ ಆಫ್ ಶ್ರೀ ಲೇಟ್ ಮೋನಪ್ಪ,
ತಳಹಾಂದಿ, ಹೊಸಪೇಟೆ, ಹಾಂದಿ ಅಂಚೆ,
ಚಿಕ್ಕಮಗಳೂರು.

**ಪ್ರತಿವಾದಿಗಳು:**

1) ಶ್ರೀ ಎನ್.ಬಿ. ಜಗದೀಶ್ ಬಿನ್ ಲೇಟ್ ಬಸವೇಗೌಡ, ಕಾಫಿ ಬೆಳೆಗಾರರು.
ವಾಟಿಗನಹಳ್ಳಿ ಎಸ್ಟೇಟ್, ವಸ್ತಾಲೆ ಹೋಬಳಿ, ಚಿಕ್ಕಮಗಳೂರು ತಾಲ್ಲೂಕು.
2) ದಿ ಬ್ರಾಂಚ್ ಮ್ಯಾನೇಜರ್ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಬ್ರಾಂಚ್ ಆಫೀಸ್, ಚಿಕ್ಕಮಗಳೂರು.

**ಪ್ರಕಟಣೆ**

ಮೃತ ಶ್ರೀ ಮೋನಪ್ಪ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:23.09.2008ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಹೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಎಸ್. ವಿಜಯಕುಮಾರ್**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ–2, ಚಿಕ್ಕಮಗಳೂರು.

ಪಿ.ಆರ್.1210

**ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ–2, ಕಾರ್ಮಿಕ ಭವನ,**
**ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು–29**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಬಿ2/ಎನ್‌ಎಫ್‌ಸಿ/ಸಿಆರ್–30/2004, ದಿನಾಂಕ:29ನೇ ಜೂನ್, 2010**

**ಅರ್ಜಿದಾರರು:**

1) ಶ್ರೀಮತಿ ಮೆಹರ್ ತಾಜ್ ಕೋಂ ಲೇಟ್ ಸೈಯದ್ ಸಲೀಂ, ಸುಮಾರು 45 ವರ್ಷ ವಯಸ್ಸು.
ವಿಳಾಸ: ಡಿ.ಜೆ.ಹಳ್ಳಿ, ರಾಣಿ ರಸ್ತೆ, ಹಸನ್ ಲೈನ್, ಬೆಂಗಳೂರು–45.
2) ಶ್ರೀಮತಿ ಸಲ್ಮ ತಾಜ್ ಕೋಂ ಗಮ್ಮಸರ್, ಸುಮಾರು 23 ವರ್ಷ ವಯಸ್ಸು.
ವಿಳಾಸ: ಶಲಿಪ್ ಮೊಹಲ್ಲಾ, ಕುಣಿಗಲ್, ತುಮಕೂರು ಜಿಲ್ಲೆ.
3) ಶ್ರೀಮತಿ ರೇಷ್ಮಾ ತಾಜ್ ಕೋಂ ಮುಬಾರಕ್ ಸುಮಾರು 22 ವರ್ಷ ವಯಸ್ಸು.
ವಿಳಾಸ: ಕುಣಿಗಲ್, ಗುಜರಿ ಮೊಹಲ್ಲಾ, ತುಮಕೂರು ಜಿಲ್ಲೆ.
4) ತಸೆನಾ ತಾಜ್ ಬಿನ್ ಲೇಟ್ ಸೈಯದ್ ಸಲೀಂ ಸುಮಾರು 20 ವರ್ಷ ವಯಸ್ಸು.
5) ಶ್ರೀಮತಿ ಯಾಸ್ಮೀನ್ ಕೋಂ ಸೈಯದ್ ಸಲೀಂ ಸುಮಾರು 19 ವರ್ಷ ವಯಸ್ಸು.
ವಿಳಾಸ: 1ನೇ ಕ್ರಾಸ್, ಅರಬಿಕ್ ಕಾಲೇಜ್, ಬೆಂಗಳೂರು.
6) ಕು: ಜಯಬ ಬಿನ್ ಲೇಟ್ ಸೈಯದ್ ಸಲೀಂ, ಸುಮಾರು 11 ವರ್ಷ ವಯಸ್ಸು.
7) ಕು: ಅಸ್‌ಮಿಯಾ ಬಿನ್ ಲೇಟ್ ಸೈಯದ್ ಸಲೀಂ ಸುಮಾರು 10 ವರ್ಷ ವಯಸ್ಸು.
8) ಶ್ರೀಮತಿ ಮಲ್ಲಿಕಾ ಬೇಗಂ ಕೋಂ ಸೈಯದ್ ಗದ್ದಾರ್, ಸುಮಾರು 70 ವರ್ಷ ವಯಸ್ಸು,
ವಿಳಾಸ: ಡಿ.ಜೆ.ಹಳ್ಳಿ, ರಾಣಿ ರಸ್ತೆ, ಹಸನ್ ಲೈನ್, ಬೆಂಗಳೂರು–45.

**ಪ್ರತಿವಾದಿಗಳು:**

1) ಶ್ರೀ ಅಬ್ದುಲ್ ಸಯೀದ್ ಬಿನ್ ಅಬ್ದುಲ್ ರಶೀದ್, ನಂ.4ಇ, 1ನೇ ಸ್ಟ್ರೀಟ್, ಶಿವಾಜಿ ರಸ್ತೆ, ಬೆಂಗಳೂರು–51.
2) ದಿ ಡಿವಿಜನಲ್ ಮ್ಯಾನೇಜರ್ ದಿ ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಡಿ.ಒ.ನಂ.5, ನಂ.72, ಮಿಷನ್ ರಸ್ತೆ, ಯುನಿಟಿ ಬಿಲ್ಡಿಂಗ್ ಅನೆಕ್ಸ್, ಬೆಂಗಳೂರು–27.

**ಪ್ರಕಟಣೆ**

ಅರ್ಜಿದಾರರಾದ ಮೆಹರ್‌ತಾಜ್, ಸಲ್ಮತಾಜ್, ರೇಷ್ಮಾ ತಾಜ್, ತಸೆನಾ ತಾಜ್, ಯಾಸ್ಮೀನ್, ಜಯಬ, ಅಸ್‌ಮಿಯಾ, ಮಲ್ಲಿಕಾ ಬೇಗಂ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಸೈಯದ್ ಸಲೀಂ ಇವರು ಪ್ರತಿವಾದಿ–1 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:14.02.2004 ಅಪಘಾತ ಹೊಂದಿದ್ದು, ಚಿಕಿತ್ಸೆ ಫಲಕಾರಿಯಾಗದೇ ದಿನಾಂಕ:01.06.2005 ರಂದು ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೇ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ

ಅಥವಾ ಅರ್ಜಿಯನ್ನು ಕೆಳಸಹಿದಾರರ ಸಮಕ್ಷಮ ಸಲ್ಲಿಸಿ, ತಾವು ಮೃತನ ಅವಲಂಬಿತರು ಎಂದು ಸಾಬೀತುಪಡಿಸುವುದು. ಪ್ರಕಟಣೆಗೊಂಡ 30 ದಿನಗಳೊಳಗಾಗಿ ಯಾವುದೇ ಅರ್ಜಿ/ ಆಕ್ಷೇಪಣೆ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

**ದೇವರಾಜು ಎಂ.ಎನ್.**

ಪಿ.ಆರ್.1191

ಕಾರ್ಮಿಕ ಪರಿಹಾರ ಆಯುಕ್ತರು,

ಉಪವಿಭಾಗ–2, ಬೆಂಗಳೂರು.

**ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–6, ಕಾರ್ಮಿಕ ಭವನ,**
**ಬನ್ನೇರುಘಟ್ಟ ರಸ್ತೆ, ಬೆಂಗಳೂರು–29**

**ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ/ಸಿಆರ್–11/2010–11, ದಿನಾಂಕ:27ನೇ ಜುಲೈ, 2010**

**ಅರ್ಜಿದಾರರು:**

1) ಶ್ರೀಮತಿ ಕಮಲಮ್ಮ ವರ್ಷ 33 ಬಿನ್ ಲೇಟ್ ರಂಗಧಾಮಯ್ಯ.
ವಿಳಾಸ: ನಂ.46, 1ನೇ ಕ್ರಾಸ್, ಹತ್ತಿರ ಪೆಪ್ಸಿ ಗೋಡೌನ್, ಪರಪ್ಪನ ಅಗ್ರಹಾರ, ಬೆಂಗಳೂರು–100.

2) ಶ್ರೀ ಮಹೇಶ್ ಕೆ.ಆರ್. ಬಿನ್ ಲೇಟ್ (30 ವರ್ಷ), ರಂಗಧಾಮಯ್ಯ.
ವಿಳಾಸ: ಕೋಡಿಪಾಳ್ಯ, ಹುಳಿಯೂರು ಹೋಬಳಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ.

**ಪ್ರತಿವಾದಿಗಳು:**

1) ಮೆ: ಪಾಲಿಫ್ಲ್ಯೂರೋ ಲಿ., ನಂ.260ಎ, ಬೊಮ್ಮಸಂದ್ರ ಇಂಡಸ್ಟ್ರಿಯಲ್ ಏರಿಯಾ, ಬೆಂಗಳುರು–560 099.

2) ಮೆ: ಕೀರ್ತನ ಎಂಟರ್ ಪ್ರೈಸೆಸ್, ಬಾಲಗರನ ಹಳ್ಳಿ, ನೆರಳೂರು ಅಂಚೆ, ಅತ್ತಿಬೆಲೆ ಇಂಡಸ್ಟ್ರಿಯಲ್ ಏರಿಯಾ, ಬೆಂಗಳೂರು–562 107.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:21.07.2010ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ಅರ್ಜಿದಾರರ ಶ್ರೀ ರಂಗಧಾಮಯ್ಯ ಇವರು ಮೇಲೆ ವಿಳಾಸಿಸಿರುವ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಯ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರೆ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎನ್.ಬಿ. ರಾಮಚಂದ್ರ**

ಕಾರ್ಮಿಕ ಪರಿಹಾರ ಆಯುಕ್ತರು, ಹಾಗೂ
ಕಾರ್ಮಿಕ ಅಧಿಕಾರಿ
ಉಪವಿಭಾಗ–6, ಬೆಂಗಳೂರು–560 029.

**ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–6, ಕಾರ್ಮಿಕ ಭವನ,**
**ಬನ್ನೇರುಘಟ್ಟ ರಸ್ತೆ, ಬೆಂಗಳೂರು–29**

**ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ/ಸಿಆರ್–12/2010–11, ದಿನಾಂಕ:27ನೇ ಜುಲೈ, 2010**

**ಅರ್ಜಿದಾರರು:**

ಶ್ರೀ ಆದೇಪ್ಪ ಲೇಟ್ ಶ್ರೀ ನರಸಪ್ಪ ಗಂಗರೆಡ್ಡಿ ಪಲ್ಲಿ, ವಿಲೇಜ್ & ಪೋಸ್ಟ್, ಪುಟ್ಟಭರ್ತಿ, ಮಂಡಲಂ, ವೈಯಾ ಕೊಂಡಕರ್ಮಲ, ಅನಂತಪುರ ಜಿಲ್ಲೆ, ಆಂಧ್ರಪ್ರದೇಶ.

**ಪ್ರತಿವಾದಿಗಳು:**

ಮೆ: ಲಿಯೋ ಮೆಟಲ್ ಪ್ರೈ.ಲಿ., ನಂ.265/ಬಿ, ಬೊಮ್ಮಸಂದ್ರ ಇಂಡಸ್ಟ್ರಿಯಲ್ ಏರಿಯಾ, ಆನೇಕಲ್ ತಾಲ್ಲೂಕು, ಬೆಂಗಳೂರು–99.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:23.07.2010ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ಅರ್ಜಿದಾರರ ಶ್ರೀ ನರೇಶ್ ಇವರು ಮೇಲೆ ವಿಳಾಸಿಸಿರುವ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಯ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರೆ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎನ್.ಬಿ. ರಾಮಚಂದ್ರ**
ಕಾರ್ಮಿಕ ಪರಿಹಾರ ಆಯುಕ್ತರು, ಹಾಗೂ
ಕಾರ್ಮಿಕ ಅಧಿಕಾರಿ
ಉಪವಿಭಾಗ–6, ಬೆಂಗಳೂರು–560 029.

ಪಿ.ಆರ್.1193

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ**

**ಸಂಖ್ಯೆ: ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ.122/2010, ದಿನಾಂಕ:12ನೇ ಜುಲೈ, 2010**

| **ಅರ್ಜಿದಾರರು:** | **ಪ್ರತಿವಾದಿಗಳು:** |
|---|---|
| ಶ್ರೀ ಶ್ಯಾಮರಾವ ಗುಂಡಾ ಸಾತಪುತೆ, ಮತ್ತು ಇತರರು, ಸಾ: ಉಪ್ಪಲದಿನ್ನಿ, ತಾ:ಬ.ಬಾಗೇವಾಡಿ, ಜಿ:ವಿಜಾಪುರ. | 1) ಶ್ರೀ ಮಹಾದೇವೋ ಕಾಕಾ ಖೋತ, ಸಾ: ಮುಸ್ಲೇವಾಡಿ, ತಾವಾಳವಾ, ಜಿ:ಸಾಂಗಲಿ. 2) ದಿ ಬ್ರ್ಯಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ.ಲಿ., ವಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಬಂದೇನವಾಜ ತಂದೆ ಮುಸ್ತಾಫ ಸಾಲವಾಡಗಿ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:15.04.2010ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪವಿಭಾಗ–2, ವಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ**

**ಸಂಖ್ಯೆ: ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ.124/2010, ದಿನಾಂಕ:14ನೇ ಜುಲೈ, 2010**

| **ಅರ್ಜಿದಾರರು:** | **ಪ್ರತಿವಾದಿಗಳು:** |
|---|---|
| ಮುಸ್ತಾಫ ತಂದೆ ಕಾಶೀಮಸಾಬ ಸಾಲವಾಡಗಿ, ಮತ್ತು ಇತರರು, ಸಾ:ಛಪ್ಪರಗಂದ ಗಲ್ಲಿ, ತಾ:ಜಿ: ವಿಜಾಪುರ. | 1) ಶ್ರೀ ಮೋತಿಲಾಲ ತಂದೆ ಲಾಲು ಚವಾಣ, ಸಾ:ಕೋಳಿಹಾಳ, ತಾ:ಸುರಪುರ, ಜಿ:ಯಾದಗಿರ್.<br>2) ದಿ ಬ್ರ್ಯಾಂಚ್ ಮ್ಯಾನೇಜರ್, ದಿ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ವಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಬಂದೇನವಾಜ ತಂದೆ ಮುಸ್ತಾಫ ಸಾಲವಾಡಗಿ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:18.04.2010ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಪಿ.ಆರ್.1194 ಕಾರ್ಮಿಕ ಅಧಿಕಾರಿ, ಉಪವಿಭಾಗ–2, ವಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ**

**ಪ್ರಕರಣ ಸಂಖ್ಯೆ: ಕಾ.ಅ.ಬಿ–2:ಕಾ.ನ.ಪ:ಮಪ್ರ:127/2010, ದಿನಾಂಕ:19ನೇ ಜುಲೈ, 2010**

| **ಅರ್ಜಿದಾರರು:** | **ಪ್ರತಿವಾದಿಗಳು:** |
|---|---|
| ಶ್ರೀಮತಿ ರುಕುಮಾಬಾಯಿ ಗಂಡ ಸಂಗಪ್ಪ ಪುಜಾರಿ ಮತ್ತು ಇತರರು, ಸಾ: ಮನಗುಳಿ, ತಾ:ಬ.ಬಾಗೇವಾಡಿ, ಜಿ:ವಿಜಾಪುರ. | 1) ಶ್ರೀ ರಮೇಶ ತಂದೆ ಸಿದ್ದಪ್ಪ ಚಿಕ್ಕಮಲೆ, ಸಾ:ಜನವಾಡಿ, ಜನತಾ ವಸಹತ್, ಜಿ:ಪೂನಾ.<br>2) ದಿ ಬ್ರ್ಯಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ವಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಸಂಗಪ್ಪ ತಂದೆ ಯಮನಪ್ಪ ಪುಜಾರಿ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:27.03.2010ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು

ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪವಿಭಾಗ–2, ವಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ**

**ಪ್ರಕರಣ ಸಂಖ್ಯೆ: ಕಾ.ಅ.ಬಿ–2:ಕಾ.ನ.ಪ:ಮಪ್ರ: 126/2010, ದಿನಾಂಕ:19ನೇ ಜುಲೈ, 2010**

| **ಅರ್ಜಿದಾರರು:** | **ಪ್ರತಿವಾದಿಗಳು:** |
|---|---|
| ಶ್ರೀ ಮಹಾದೇವ ತಂದೆ ನ್ಯಾಮದೇವ ಸಾಗರ, ಮತ್ತು ಇತರರು, ಸಾ: ಲಚ್ಯಾಣ, ತಾ:ಇಂಡಿ, ಜಿ:ವಿಜಾಪುರ. | 1) ಶ್ರೀ ಗಣೇಶ ತಂದೆ ಮಧುಕರ ದಂದಗೆ, ಸಾ: ಕೊಂಡರ್ಕಿ, ತಾ: ಪಂಢರಪುರ, ಜಿ:ಸೋಲಾಪುರ.<br>2) ದಿ ಬ್ರ್ಯಾಂಚ್ ಮ್ಯಾನೇಜರ್, ರಿಲಾಯನ್ಸ್ ಜನರಲ್ ಇನ್ಶೂರೆನ್ಸ್ ಕಂ.ಲಿ., ಬೆಂಗಳೂರು. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ದತ್ತಾ ತಂದೆ ಮಹಾದೇವ ಸಾಗರ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:08.04.2010ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಪಿ.ಆರ್.1195 ಕಾರ್ಮಿಕ ಅಧಿಕಾರಿ, ಉಪವಿಭಾಗ–2, ವಿಜಾಪುರ.

**IN THE COURT OF COMMISSIONER FOR WORKMEN'S COMPENSATION, BIDAR**

**No. LOB/WCA/Cr-F-35/2010**

| **Applicants:** | **V/s** | **Respondents:** |
|---|---|---|
| 1) Chandramma W/o Late Laxman Kattimani, Age: 40 Years Occu: House hold R/o Shivapur Galli Tq: Humnabad, Dist:Bidar, and I others. | | 1) The Chairman/ President B.S.S.K. Ltd., Hallikhed-B Tq: Humnabad District: Bidar.<br>2) The Branch Manager, United India Insurance Co.Ltd., Bidar. |

## PROCLAIMATION

Smt. Chandramma W/o. F/o. S/o. Late: Laxman Kattimani R/o Shivapur galli, Humnabad Dist: Bidar,have/has filed application in this Court claiming compensation stating that Late: Laxman Kattimani was working as Boiler operator, Under the Respondent No.I he met with an accident arising out of and during the course of employment as a result he died on 05.02.2007.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications on objections are received within the specified date the Court will proceeded further in the matter.

Commissioner for workmen's
Compensation, Bidar.

PR-1196

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ

**ಸಂಖ್ಯೆ: ಡಬ್ಲ್ಯೂಸಿಎ/ಎಫ್/ಎಸ್‌ಆರ್–20/2010, ದಿನಾಂಕ:2ನೇ ಆಗಸ್ಟ್, 2010**

| ಅರ್ಜಿದಾರರು: | ಪ್ರತಿವಾದಿಗಳು: |
| --- | --- |
| ಶ್ರೀಮತಿ ತಂಗ್ಯಮ್ಮ ಕೋಂ ನಿಂಗೇಗೌಡ, ಕ್ಯಾನಳ್ಳಿ ಗ್ರಾಮ ಮತ್ತು ಅಂಚೆ, ಸಕಲೇಶಪುರ ತಾಲ್ಲೂಕು. | 1) ರವಿಕುಮಾರ್ ವೈ.ಆರ್. ಬಿನ್ ರಾಜಪ್ಪ ವೈ.ಎನ್. ನಾಯ್ಡು ಕಾಂಪೌಂಡ್, ಲಕ್ಷ್ಮೀಪುರ, ಸಕಲೇಶಪುರ.<br>2) ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪೆನಿ ಲಿಮಿಟೆಡ್, ಹರ್ಷಮಹಲ್ ರಸ್ತೆ, ಹಾಸನ. |

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ರಘು, ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:24.05.2010 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್. ಗುರುಪ್ರಸಾದ್**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ

**ಸಂಖ್ಯೆ: ಡಬ್ಲ್ಯೂಸಿಎ/ಎಫ್/ಎಸ್‌ಆರ್–21/2010, ದಿನಾಂಕ:2ನೇ ಆಗಸ್ಟ್, 2010**

| ಅರ್ಜಿದಾರರು: | ಪ್ರತಿವಾದಿಗಳು: |
| --- | --- |
| 1) ಶ್ರೀಮತಿ ಮಂಜುಳ ಕೋಂ ಲೇಟ್ ಮೋಹನ್<br>2) ಕುಮಾರಿ ಸೌಂದರ್ಯ ಅಲಿಯಾಸ್ ಸಹನಾ ಬಿನ್ ಲೇ: ಮೋಹನ್. | 1) ಶ್ರೀಮತಿ ರೇಖಾ ಕೋಂ ಜಯಶೆಟ್ಟಿ, ಶುಕ್ರಿತಾ ಟೆಲಿಫೋನ್ ಆಫೀಸ್ ಹತ್ತಿರ, ಬಜಾಲಿ, ಎಕ್ಕೂರು, ಮಂಗಳೂರು. |

3) ಮಾಸ್ಟರ್ ಕೇಶವ ಮೂರ್ತಿ ಬಿನ್ ಲೇ: ಮೋಹನ್
4) ಶ್ರೀಮತಿ ನಾಗರತ್ನ ಕೋಂ ಬಸವರಾಜು
5) ಬಸವರಾಜು ಬಿನ್ ಲೇ: ದೊಡ್ಡಚನ್ನಪ್ಪ,
ಅಡ್ಲಿಮನೆ ರಸ್ತೆ, ಹಾಸನ.

2) ಯುನಿವರ್ಸಲಿ ಸೋಂಪೋ ಜನರಲ್ ಇನ್ಶೂರೆನ್ಸ್ ಕಂಪೆನಿ ಲಿಮಿಟೆಡ್,
ಆರ್.ವಿ.ಜಿ. ಟವರ್ಸ್, ನಂ.1/3, 2ನೇ ಮಹಡಿ, 3ನೇ ಅಡ್ಡರಸ್ತೆ ಮುಂಭಾಗ, ಹಳೇಮದ್ರಾಸ್ ರಸ್ತೆ, ಜಯನಗರ, ಬೆಂಗಳೂರು.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ರಘು, ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:07.05.2010 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್. ಗುರುಪ್ರಸಾದ್**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

ಪಿ.ಆರ್.1208

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ: ಡಬ್ಲ್ಯೂಸಿಎ/ಎಫ್/ಎಸ್‌ಆರ್–22/2010, ದಿನಾಂಕ:2ನೇ ಆಗಸ್ಟ್, 2010**

**ಅರ್ಜಿದಾರರು:**

1) ಶ್ರೀಮತಿ ಸರಸ್ವತಿ ಕೋಂ ಲೇಟ್ ಮಧು
2) ಕೀರ್ತನಾ ಬಿನ್ ಲೇಟ್ ಮಧು
ಬನವಾಸೆ ಗ್ರಾಮ, ಮೊಸಳೇ ಹೊಸಹಳ್ಳಿ ಅಂಚೆ,
ಶಾಂತಿಗ್ರಾಮ ಹೋಬಳಿ, ಹಾಸನ ಜಿಲ್ಲೆ.

**ಪ್ರತಿವಾದಿಗಳು:**

1) ಮೋಹನ್ ಬಿನ್ ನಾರಾಯಣರಾವ್
ನಂ.6, 3ನೇ ಅಡ್ಡರಸ್ತೆ, ವಲ್ಲಬಾಯಿ ರೋಡ್, ಹಾಸನ.
2) ಐ.ಸಿ.ಐ.ಸಿ.ಐ. ಲ್ಯಾಂಬೋರ್ಡ್ ಜನರಲ್ ಇನ್ಶೂರೆನ್ಸ್ ಕಂಪೆನಿ ಲಿ., ಮುಂಬೈ ಮತ್ತು ಹಾಸನ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ರಘು, ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:06.04.2010 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್. ಗುರುಪ್ರಸಾದ್**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ: ಡಬ್ಲ್ಯೂಸಿಎ/ಎಫ್/ಎಸ್‌ಆರ್-23/2010, ದಿನಾಂಕ:2ನೇ ಆಗಸ್ಟ್, 2010**

**ಅರ್ಜಿದಾರರು:**

1) ಶ್ರೀಮತಿ ಸುಜಾತ ಕೋಂ ಲೇಟ್ ಸುರೇಶ

2) ದರ್ಶನ್ ಬಿನ್ ಲೇಟ್ ಸುರೇಶ

3) ದಿವ್ಯ ಬಿನ್ ಲೇಟ್ ಸುರೇಶ

4) ದ್ಯಾವಮ್ಮ ಕೋಂ ಲೇಟ್ ದ್ಯಾವಯ್ಯ

ಬನವಾಸೆ ಗ್ರಾಮ, ಮೊಸಳೇ ಹೊಸಹಳ್ಳಿ ಅಂಚೆ,

ಶಾಂತಿಗ್ರಾಮ ಹೋಬಳಿ, ಹಾಸನ ಜಿಲ್ಲೆ.

**ಪ್ರತಿವಾದಿಗಳು:**

1) ಮೋಹನ್ ಬಿನ್ ನಾರಾಯಣರಾವ್

ನಂ.6, 3ನೇ ಅಡ್ಡರಸ್ತೆ, ವಲ್ಲಬಾಯಿ ರೋಡ್, ಹಾಸನ.

2) ಐ.ಸಿ.ಐ.ಸಿ.ಐ. ಲ್ಯಾಂಬೋರ್ಡ್ ಜನರಲ್ ಇನ್ಸೂರೆನ್ಸ್ ಕಂಪೆನಿ ಲಿ., ಮುಂಬೈ ಮತ್ತು ಹಾಸನ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ರಘು, ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:06.04.2010 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್. ಗುರುಪ್ರಸಾದ್**

ಕಾರ್ಮಿಕ ಅಧಿಕಾರಿ ಹಾಗೂ

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,

ಹಾಸನ ಉಪವಿಭಾಗ, ಹಾಸನ.

ಪಿ.ಆರ್.1209

**ಆರ್ಥಿಕ ಇಲಾಖೆ**

**ಅಧಿಕೃತ ಜ್ಞಾಪನ**

**ಸಂಖ್ಯೆ: ಆಇ 24 ಸಉಲಾ 2010, ಬೆಂಗಳೂರು, ದಿನಾಂಕ:30ನೇ ಜುಲೈ, 2010**

**ವಿಷಯ:** ದಿನಾಂಕ: 01.01.2010ರಲ್ಲಿದ್ದಂತೆ ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ ಋಣ ನಿರ್ವಹಣೆ ಇಲಾಖೆಯಲ್ಲಿನ ಸಹಾಯಕ ನಿರ್ದೇಶಕರ ವೃಂದದ ಅಂತಿಮ ಜೇಷ್ಠತಾ ಪಟ್ಟಿ ಪ್ರಚುರಪಡಿಸುವ ಬಗ್ಗೆ.

**ಉಲ್ಲೇಖ:**

1. ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ: ಆಇ 24 ಸಉಲಾ 2010, ದಿನಾಂಕ: 08.04.2010.
2. ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ ಋಣ ನಿರ್ವಹಣೆ ಇಲಾಖೆಯ ನಿರ್ದೇಶಕರ ಪತ್ರಸಂಖ್ಯೆ:ಸಉಪಿ(3)90/2008-09, ದಿನಾಂಕ: 04.06.2010.
3. ಸರ್ಕಾರದ ಆದೇಶ ಸಂಖ್ಯೆ: ಆಇ 25 ಸಉಲಾ 2010, ದಿನಾಂಕ: 21.04.2010.

ಮೇಲೆ ಉಲ್ಲೇಖ (1)ರ ಅಧಿಕೃತ ಜ್ಞಾಪನದಲ್ಲಿ ಸಹಾಯಕ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಕಟಿಸಿ ಈ ಕುರಿತು ಆಕ್ಷೇಪಣೆಗಳೇನಾದರೂ ಇದ್ದಲ್ಲಿ 30 ದಿನಗಳ ಒಳಗೆ ಸಲ್ಲಿಸಲು ಸೂಚಿಸಲಾಗಿತ್ತು. ಮೇಲೆ (2)ರಲ್ಲಿ ನಮೂದಿಸಿದ ದಿನಾಂಕ: 04.06.2010ರ ಪತ್ರದಲ್ಲಿ ತಾತ್ಕಾಲಿಕ ಜೇಷ್ಠತಾ ಪಟ್ಟಿಯ ಬಗ್ಗೆ ಶ್ರೀ ಎನ್. ರಂಗಯ್ಯ, ಸಹಾಯಕ ನಿರ್ದೇಶಕರು, ಕೋಲಾರ, ಇವರು ತಮ್ಮ ಇನಿಷಿಯಲ್ ಎನ್ ಬದಲಾಗಿ ಎಲ್ ಎಂದು ಮತ್ತು ಪ್ರಸ್ತುತ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ದಿನಾಂಕ: 19.07.1993 ಎಂಬುದರ ಬದಲಾಗಿ 11.07.1993 ಎಂದು ನಮೂದಿಸಿರುವುದರಿಂದ ಇದನ್ನು ಸರಿಪಡಿಸುವಂತೆ ಆಕ್ಷೇಪಣೆಯನ್ನು ಸಲ್ಲಿಸಿರುವುದಾಗಿ, ಹಾಗೂ ಅರ್ಹತಾ ದಿನಾಂಕವನ್ನು 30.06.1993 ಎಂದು ತಿದ್ದುಪಡಿ ಮಾಡಲು ನಿರ್ದೇಶಕರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಶ್ರೀ ರಂಗಯ್ಯರವರ ಇನಿಷಿಯಲ್ 'ಎನ್' ಎಂದು ತಿದ್ದುಪಡಿ ಮಾಡಲು ಮತ್ತು ಅಧಿಸೂಚನೆ ಸಂಖ್ಯೆ: ಆಇ 106 ಸಉಲಾ 95, ದಿನಾಂಕ: 30.05.1996ರಲ್ಲಿ ಸದರಿಯವರಿಗೆ ದಿನಾಂಕ: 19.07.1993ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸದರಿಯವರಿಗೆ ಸಹಾಯಕ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡಿರುವುದರಿಂದ ಪ್ರಸ್ತುತ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ದಿನಾಂಕ ಮತ್ತು ಅರ್ಹತಾ ದಿನಾಂಕ: 19.07.1993 ಎಂದು ಪರಿಗಣಿಸಲು ಸರ್ಕಾರ ತೀರ್ಮಾನಿಸಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ:21.04.2010ರ ಸರ್ಕಾರಿ ಆದೇಶದಲ್ಲಿ ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ನಿರ್ದೇಶನಾಲಯವನ್ನು ಮರುವಿನ್ಯಾಸಗೊಳಿಸಿ ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ ಋಣ ನಿರ್ವಹಣೆ ನಿರ್ದೇಶನಾಲಯವೆಂದು ಪುನರ್‌ರಚಿಸಲಾಗಿದೆ.

ಆದ್ದರಿಂದ, ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ ಋಣ ನಿರ್ವಹಣೆ ಇಲಾಖೆಯಲ್ಲಿ ದಿನಾಂಕ:01.01.2010 ರಲ್ಲಿದ್ದಂತೆ ಸಹಾಯಕ ನಿರ್ದೇಶಕರುಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಕೆಳಗಿನಂತೆ ಪ್ರಕಟಿಸಲಾಗಿದೆ.

| ಕ್ರ. ಸಂ. | ಅಧಿಕಾರಿಗಳ ಹೆಸರು ಶ್ರೀ/ ಶ್ರೀಮತಿ | ಜನ್ಮ ದಿನಾಂಕ | ಸರ್ಕಾರಿಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಕಾರ್ಯನಿರ್ವ ಹಿಸುತ್ತಿರುವ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 1 | 2 | 3 | 4 | 5 | 6 |
| 1. | ಜಿ.ಎಂ.ಶೆಡೋಳೆ | 25–09–1952 | 25–11–1977 | 11–12–1988 | 11–12–1988 |
| 2. | ಪಿ.ದೇವೇಂದ್ರಸ್ವಾಮಿ | 08–09–1951 | 05–11–1981 | 01–04–1990 | 01–04–1990 |
| 3. | ಸಿ.ಕೃಷ್ಣಪ್ಪ | 09–06–1955 | 01–10–1981 | 01–04–1990 | 01–04–1990 |
| 4. | ಹೆಚ್.ರುದ್ರಪ್ಪ | 01–06–1954 | 27–03–1984 | 01–06–1992 | 01–06–1992 |
| 5. | ಟಿ.ಪುಟ್ಟಸ್ವಾಮಿ | 01–05–1954 | 01–12–1983 | 28–05–1992 | 28–05–1992 |
| 6. | ಮಹದೇವ ಮಡಿವಾಳ | 01–04–1953 | 11–07–1985 | 17–11–1992 | 16–11–1992 |
| 7. | ಎನ್.ರಂಗಯ್ಯ | 29–09–1962 | 02–09–1985 | 19–07–1993 | 19–07–1993 |
| 8. | ಶಂಕರ್.ಬೀ.ನಾಯಕವಾಡಿ | 20–05–1958 | 30–03–1984 | 04–08–1995 | 04–08–1995 |
| 9. | ಶಿವಾನಂದ | 18–05–1955 | 03–04–1984 | 04–08–1995 | 04–08–1995 |
| 10. | ಕೆ.ಸಿದ್ದಪ್ಪ | 07–10–1956 | 26–03–1984 | 04–12–1995 | 04–12–1995 |
| 11. | ಎಂ.ಕೆ.ಹೆಗಡೆ | 14–06–1959 | 03–04–1984 | 04–12–1995 | 04–12–1995 |
| 12. | ಎಂ.ಬಿ.ಸಿದ್ದರಾಜು | 08–05–1952 | 30–09–1985 | 20–12–1995 | 04–12–1995 |
| 13. | ಎಸ್.ಆರ್.ದುಂಡಗಿ | 20–07–1961 | 30–03–1984 | 03–08–2001 | 02–08–2001 |
| 14. | ಎಸ್.ಶ್ರೀನಿವಾಸಯ್ಯ | 10–04–1954 | 04–04–1984 | 02–08–2001 | 02–08–2001 |
| 15. | ಕೆ.ಸುಲೋಚನ | 12–07–1957 | 29–03–1984 | 03–08–2001 | 02–08–2001 |
| 16. | ಎಂ.ಎಸ್.ಪಾಟೀಲ್ | 20–07–1956 | 26–03–1984 | 03–08–2001 | 02–08–2001 |
| 17. | ವಿ.ಕಲಾವತಿ | 22–10–1964 | 02–09–1985 | 04–08–2001 | 02–08–2001 |
| 18. | ಎಂ.ಎ.ಮೂಡಲಗಿ | 01–06–1960 | 04–09–1985 | 03–08–2001 | 02–08–2001 |
| 19. | ಕೆ.ಆರ್.ನಾಗೇಂದ್ರರಾವ್ | 28–04–1960 | 09–09–1985 | 09–08–2001 | 02–08–2001 |

| ಕ್ರ. ಸಂ. | ಅಧಿಕಾರಿಗಳ ಹೆಸರು ಶ್ರೀ/ ಶ್ರೀಮತಿ | ಜನ್ಮ ದಿನಾಂಕ | ಸರ್ಕಾರಿಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಕಾರ್ಯನಿರ್ವ ಹಿಸುತ್ತಿರುವ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 1 | 2 | 3 | 4 | 5 | 6 |
| 20. | ಚಂದ್ರೇಗೌಡ | 18–07–1961 | 04–09–1985 | 03–08–2001 | 02–08–2001 |
| 21. | ಸಿ.ಪುಟ್ಟರಾಜು | 25–06–1960 | 25–09–1985 | 03–08–2001 | 02–08–2001 |
| 22. | ಬಿ.ಜಯಪ್ಪ | 03–06–1962 | 24–11–1988 | 03–08–2001 | 02–08–2001 |
| 23. | ಬಿ.ಜಿ.ಮಲ್ಲೇದೇವರು | 08–06–1954 | 05–09–1985 | 20–09–2001 | 13–09–2001 |
| 24. | ಜರೀನಾ ಎಂ.ಶೇಖ್ | 28–05–1954 | 06–09–1985 | 20–09–2001 | 13–09–2001 |
| 25. | ನಾಡಗಿರಿ ಶಂಕರ್.ಆರ್ | 19–07–1961 | 25–11–1988 | 18–09–2001 | 13–09–2001 |
| 26. | ಪಿ.ಲಿಂಗಪ್ಪ | 25–12–1954 | 02–09–1985 | 15–10–2004 | 03–09–2004 |
| 27. | ರಾಜಶೇಖರಯ್ಯ | 01–06–1960 | 03–09–1985 | 13–12–2007 | 01–12–2007 |
| 28. | ಜಿ.ಕೆ.ಗೌಡರ್ | 26–06–1960 | 10–09–1985 | 13–12–2007 | 01–12–2007 |
| 29. | ಮಹಮದ್ ಹುಸೇನ್ | 20–08–1959 | 03–07–1985 | 19–12–2007 | 01–12–2007 |
| 30. | ಡಿ.ನಾರಾಯಣಸ್ವಾಮಿ | 25–07–1962 | 26–11–1988 | 12–12–2007 | 01–12–2007 |

**ಎನ್. ಶ್ರೀನಿವಾಸ ಮೂರ್ತಿ**

ಪಿ.ಆರ್.1204

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

**ಆರ್ಥಿಕ ಇಲಾಖೆ**

**ಅಧಿಕೃತ ಜ್ಞಾಪನ**

**ಸಂಖ್ಯೆ: ಆಇ 21 ಸಉಲಾ 2010, ಬೆಂಗಳೂರು, ದಿನಾಂಕ:9ನೇ ಜುಲೈ, 2010**

**ವಿಷಯ:** ದಿನಾಂಕ: 01.01.2010ರಲ್ಲಿದ್ದಂತೆ ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆಯಲ್ಲಿನ ಉಪ ನಿರ್ದೇಶಕರ ವೃಂದದ ಅಂತಿಮ ಜೇಷ್ಠತಾ ಪಟ್ಟಿ ಪ್ರಚುರಪಡಿಸುವ ಬಗ್ಗೆ.

**ಉಲ್ಲೇಖ:**

1. ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ: ಆಇ 39 ಸಉಲಾ 2008, ದಿನಾಂಕ:11.03.2010.
2. ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ:ಸಉಸಿ(3)89/2008/09, ದಿನಾಂಕ:02.03.2010.
3. ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ:ಆಇ 21 ಸಉಲಾ 2010, ದಿನಾಂಕ:08.04.2010.
4. ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ನಿರ್ದೇಶಕರ ಪತ್ರಸಂಖ್ಯೆ: ಸಉಸಿ(3)89/2008–09, ದಿನಾಂಕ:27.04.2010 ಮತ್ತು ದಿನಾಂಕ:11.06.2010.
5. ಸರ್ಕಾರದ ಪತ್ರ ಸಂಖ್ಯೆ:ಆಇ182 ಸಉಲಾ 2006, ದಿನಾಂಕ:16.11.2009.
6. ಸರ್ಕಾರದ ಆದೇಶ ಸಂಖ್ಯೆ: ಆಇ 25 ಸಉಲಾ 2010, ದಿನಾಂಕ:21.04.2010.

1) ಉಲ್ಲೇಖ (3)ರ ದಿನಾಂಕ:08.04.2010ರ ಸರ್ಕಾರದ ಅಧಿಕೃತ ಜ್ಞಾಪನದಲ್ಲಿ ಬಂಡವಾಳ ಹೂಡಿಕೆ, ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ಉಪ ನಿರ್ದೇಶಕರು ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿದ್ದು, ಈ ಕುರಿತು ಆಕ್ಷೇಪಣೆಗಳೇನಾದರೂ ಇದ್ದಲ್ಲಿ 30 ದಿನಗಳ ಒಳಗೆ ಸಲ್ಲಿಸಲು ತಿಳಿಸಲಾಗಿದೆ.

2) ಮೇಲೆ (4)ರಲ್ಲಿ ಓದಲಾದ ದಿನಾಂಕ:27.04.2010 ಮತ್ತು ದಿನಾಂಕ:11.06.2010ರ ನಿರ್ದೇಶಕರ ಪತ್ರಗಳಲ್ಲಿ ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಶ್ರೀ ಎ.ಆರ್. ಸತ್ಯನಾರಾಯಣ, ಉಪ ನಿರ್ದೇಶಕರು (ಲಾಟರಿ), ಇವರು ಆಕ್ಷೇಪಣೆಯನ್ನು ಸಲ್ಲಿಸಿ ಅವರ ಹೆಸರಿನ ಮುಂದೆ ಅರ್ಹತಾ ದಿನಾಂಕದ ಕಾಲಂನಲ್ಲಿ ದಿನಾಂಕ:02.08.2001 ಎಂದು ನಮೂದಿಸಬೇಕೆಂದು ಕೋರಿರುವ ಪತ್ರವನ್ನು ಲಗತ್ತಿಸಿ ಕಳುಹಿಸಿಕೊಡಲಾಗಿದೆ. ಶ್ರೀ ಸತ್ಯನಾರಾಯಣ, ಉಪ ನಿರ್ದೇಶಕರು (ಲಾಟರಿ), ಇವರ ಪೂರ್ವಾನ್ವಯ ಬಡ್ತಿ ನೀಡುವ ಕೋರಿಕೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಉಲ್ಲೇಖ (5)ರಲ್ಲಿನ ಪತ್ರದನುಸಾರ ಈಗಾಗಲೇ ತಿರಸ್ಕರಿಸಲಾಗಿದೆ. ಆದುದರಿಂದ ಸದರಿ ಅಧಿಕಾರಿಯವರ ಆಕ್ಷೇಪಣೆಗಳನ್ನು ಮತ್ತೆ ಪರಿಗಣಿಸಲು ಯೋಗ್ಯವಾಗಿರುವುದಿಲ್ಲವೆಂದು ಸರ್ಕಾರವು ತೀರ್ಮಾನಿಸಿದೆ.

3) ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ದಿನಾಂಕ:21.04.2010ರ ಸರ್ಕಾರಿ ಆದೇಶದಲ್ಲಿ ಬಂಡವಾಳ ಹೂಡಿಕೆ, ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ನಿರ್ದೇಶನಾಲಯವನ್ನು ಮರುವಿನ್ಯಾಸಗೊಳಿಸಿ ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ನಿರ್ದೇಶನಾಲಯ ಎಂದು ಪುನರ್ ರಚಿಸಲಾಗಿದೆ.

4) ಆದ್ದರಿಂದ ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆಯ ಉಪ ನಿರ್ದೇಶಕರು ವೃಂದದ ದಿನಾಂಕ:01.01.2010ರಲ್ಲಿದ್ದಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಕೆಳಗಿನಂತೆ ಪ್ರಕಟಿಸಲಾಗಿದೆ.

| ಕ್ರ. ಸಂ. | ಹೆಸರು ಶ್ರೀಯುತರು | ಜನ್ಮ ದಿನಾಂಕ | ಸರ್ಕಾರದ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 1. | ಓ. ಬೊಮ್ಮಣ್ಣ | 08.11.1953 | 01.10.1981 | 11.08.1995 | 04.07.1995 |
| 2. | ಎ.ಆರ್. ಸತ್ಯನಾರಾಯಣ | 04.09.1952 | 01.10.1981 | 14.06.2006 | 01.06.2006 |

**ಎನ್. ಶ್ರೀನಿವಾಸ ಮೂರ್ತಿ**

ಪಿ.ಆರ್.1212

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ

**ವಿಷಯ:** ಸ್ಥಗಿತಗೊಂಡಿರುವ ಆದಿಶಕ್ತಿ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ದೊಣ್ಣೆಹಳ್ಳಿ, ಜಗಳೂರು–ತಾ: ದಾವಣಗೆರೆ ಜಿಲ್ಲೆ, ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** (1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ, ಇವರ ಪ್ರಸ್ತಾವನೆ ಸಂಖ್ಯೆ: ಸನಿ/ ಹೆಚ್‌ಆರ್‌ಪಿ/ ಸಮಾಪನೆ/ಸಿಆರ್–/09–10 ದಿನಾಂಕ:01.02.2010.

(2) ಈ ಕಛೇರಿ ಸಮ ಸಂಖ್ಯೆ ಕಾರಣ ಕೇಳಿ ತಿಳುವಳಿಕೆ ಪತ್ರ ದಿನಾಂಕ:21.01.2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರು ಉಲ್ಲೇಖ (1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯಚಟುವಟಿಕೆಗಳು ಹಲವು ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರಲ್ಲಿ ನೋಟೀಸು ನೀಡಿದ್ದು, ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ

ಹಾಗೂ ಈ ಸಂಘದ ಲೆಕ್ಕಪುಸ್ತಕಗಳು, ಲೆಕ್ಕಪರಿಶೋಧನಾ ವರದಿಗಳು ಲಭ್ಯವಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ.ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-/2009-10, ದಿನಾಂಕ:7ನೇ ಜುಲೈ, 2010**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ.ಕುಬೇರಪ್ಪ ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಶ್ರೀ ಆದಿಶಕ್ತಿ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ. ದೊಣ್ಣೆಹಳ್ಳಿ, ಜಗಳೂರು ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, ಜಗಳೂರು, ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಠ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:07.07.2010ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.1100

**ಕರ್ನಾಟಕ ಸರ್ಕಾರ, ಸಾರ್ವಜನಿಕ ಶಿಕ್ಷಣ ಇಲಾಖೆಯ, ಅಪರ ಆಯುಕ್ತರ ಕಛೇರಿ,**
**ಐವಾನ-ಎ-ಶಾಹಿ ಬಡಾವಣೆ, ಗುಲ್ಬರ್ಗಾ**

**ಅಧಿಸೂಚನೆ**

**ಸಂಖ್ಯೆ: ಯೋ-2 ಕಛೇರಿ ಸ್ಥಳಾಂತರ/15/2008-09, ದಿನಾಂಕ:30ನೇ ಜೂನ್, 2010**

**ವಿಷಯ:** ಬಳ್ಳಾರಿ ಪಶ್ಚಿಮ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯನ್ನು ಕುರುಗೋಡು ಗ್ರಾಮಕ್ಕೆ ಸ್ಥಳಾಂತರಿಸುವ ಬಗ್ಗೆ.

**ಉಲ್ಲೇಖ:** (1) ಉಪ ನಿರ್ದೇಶಕರು, (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ ಬಳ್ಳಾರಿ ರವರ ಪತ್ರ ದಿನಾಂಕ: 27.09.2008.

(2) ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಬಳ್ಳಾರಿ ರವರ ಪತ್ರ ದಿನಾಂಕ:15.02.2008.

(3) ಈ ಕಛೇರಿಯ ಪತ್ರ ಸಮ ಸಂಖ್ಯೆ ದಿನಾಂಕ:05.04.2010.

(4) ಸರ್ಕಾರದ ಆದೇಶ ಸಂಖ್ಯೆ: ಇಡಿ 309 ಯೋಸಕ 2009, ದಿನಾಂಕ:22.06.2010 (ಇಡಿ 76 ಸ್ವೀಮರ (ಯುನಿಕ) 2010.

ಬಳ್ಳಾರಿ ಪಶ್ಚಿಮ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯವ್ಯಾಪ್ತಿಯನ್ನು ಅವಲೋಕಿಸಿ ಶೈಕ್ಷಣಿಕ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ಪಶ್ಚಿಮ ವಲಯದ ಮಧ್ಯ ಭಾಗದಲ್ಲಿರುವ ಕುರುಗೋಡು ಗ್ರಾಮಕ್ಕೆ ಸ್ಥಳಾಂತರಿಸುವುದು ಸೂಕ್ತವೆಂದು ಉಲ್ಲೇಖ (1) ಮತ್ತು (2)ರಲ್ಲಿ ಸಲ್ಲಿಸಲಾದ ಪ್ರಸ್ತಾವನೆಯನ್ನು ಪರಿಶೀಲಿಸಿ, ಉಲ್ಲೇಖ (3)ರ ಈ ಕಛೇರಿಯ ಪತ್ರದಲ್ಲಿ ಬಳ್ಳಾರಿ ಪಶ್ಚಿಮ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯನ್ನು ಕುರುಗೋಡು ಗ್ರಾಮಕ್ಕೆ ಸ್ಥಳಾಂತರಿಸಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. ಅದರಂತೆ ಉಲ್ಲೇಖ (4)ರ ಸರ್ಕಾರದ ಪತ್ರದಲ್ಲಿ ಕುರುಗೋಡು ಕೇಂದ್ರವನ್ನಾಗಿ ಬಳ್ಳಾರಿ ಪಶ್ಚಿಮ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯನ್ನು ಸಿಬ್ಬಂದಿ ಮತ್ತು ಪ್ರಸ್ತುತ ಇರುವ ಪರಿಕರ ಜೊತೆಗೆ

ಸ್ಥಳಾಂತರಿಸಲು ಅನುಮತಿ ನೀಡಿದೆ. ಈ ಹಿನ್ನೆಲೆಯಲ್ಲಿ ಶೈಕ್ಷಣಿಕ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ತಕ್ಷಣ ಸ್ಥಳಾಂತರಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಗಿನಂತೆ ಆದೇಶ.

**ಆದೇಶ**

ಬಳ್ಳಾರಿ ಪಶ್ಚಿಮ ವಲಯದ ಶೈಕ್ಷಣಕಿ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಈ ಕೆಳಗಿನ ಷರತ್ತುಗಳಿಗೊಳಪಟ್ಟು ಬಳ್ಳಾರಿ ಪಶ್ಚಿಮ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯನ್ನು ಸಂಪೂರ್ಣವಾಗಿ ಕುರುಗೋಡು ಗ್ರಾಮಕ್ಕೆ ಸ್ಥಳಾಂತರಿಸಿ ಆದೇಶಿಸಿದೆ.

1) ಪ್ರಸ್ತುತ ಪಶ್ಚಿಮ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಸಿಬ್ಬಂದಿ ಮತ್ತು ಪರಿಕರಗಳ ಜೊತೆಗೆ ಸ್ಥಳಾಂತರಿಸಿದೆ.

2) ಕುರುಗೋಡು ಗ್ರಾಮದಲ್ಲಿ ಪ್ರಸ್ತುತ ಖಾಲಿ ಇರುವ ಲೋಕೋಪಯೋಗಿ ಇಲಾಖೆಯ ಕಟ್ಟಡದಲ್ಲಿ ತಾತ್ಕಾಲಿಕವಾಗಿ ಅಂದರೆ ಸ್ವಂತ ಕಟ್ಟಡವಾಗುವವರೆಗೆ ಸ್ಥಳಾಂತರಿಸುವುದು. ಮತ್ತು ಇದಕ್ಕೆ ತಗಲುವ ವೆಚ್ಚವನ್ನು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳೊಂದಿಗೆ ಸಂಪರ್ಕಿಸಿ, ಹಾಲಿ ವರ್ಷಕ್ಕಾಗಿ ಬಿಡುಗಡೆಯಾಗಿರುವ ಸಾಮಾನ್ಯ ವೆಚ್ಚದಲ್ಲಿ ಭರಿಸತಕ್ಕದ್ದು.

3) ಹಾಲಿ ಪಶ್ಚಿಮ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯವ್ಯಾಪ್ತಿಯನ್ನೇ ಮುಂದುವರೆಸಿದೆ. ಹಾಗೂ ಅಧೀನ ಬರುವ ಕ್ಷೇತ್ರ ಸಂಪನ್ಮೂಲ ಕೇಂದ್ರ (ಬಿ.ಆರ್.ಸಿ.) ವನ್ನು ಸಹ ಸ್ಥಳಾಂತರಿಸುವುದು.

4) ಕಛೇರಿಯ ಪದನಾಮವನ್ನು "ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಕುರುಗೋಡು ಜಿಲ್ಲಾ ಬಳ್ಳಾರಿ" ಎಂದು ಘೋಷಿಸಿದೆ. ಅದರಂತೆ ಕಛೇರಿಯ ಮೊಹರುಗಳನ್ನು ಉಪಯೋಗಿಸಿಕೊಳ್ಳತಕ್ಕದ್ದು.

**ಸೈಯದ್ ಅಬ್ದುಲ್ ರಬ್**
ಅಪರ ಆಯುಕ್ತರು,
ಸಾರ್ವಜನಿಕ ಶಿಕ್ಷಣ ಇಲಾಖೆ.

ಪಿ.ಆರ್.1138

**ಇಂಧನ ಇಲಾಖೆ**

**ಸಂಖ್ಯೆ: ಇಎನ್ 47 ಸಮನ್ವಯ 2010, ಬೆಂಗಳೂರು, ದಿನಾಂಕ:21ನೇ ಜುಲೈ, 2010**

**ತಿದ್ದುಪಡಿ**

**ಸಂಖ್ಯೆ:ಇಎನ್47 ಸಮನ್ವಯ 2010 ದಿನಾಂಕ:02.07.2010 ಅಧಿಸೂಚನೆಯ ಅಂಕಣ (5)ರಲ್ಲಿ**

| ಶಾಖೆ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) |
|---|---|---|
| ಸುಧಾರಣೆ ಶಾಖೆ | ವಿಶೇಷಾಧಿಕಾರಿ, ಸುಧಾರಣೆ ಶಾಖೆ, ಕೊಠಡಿ ಸಂಖ್ಯೆ:225, 2ನೇ ಮಹಡಿ ವಿಕಾಸಸೌಧ, ಬೆಂಗಳೂರು-560 001. | ಲೆಕ್ಕಾಧಿಕಾರಿ-1, ಸುಧಾರಣೆ ಶಾಖೆ, ಕೊಠಡಿ ಸಂಖ್ಯೆ:225, 2ನೇ ಮಹಡಿ, ವಿಕಾಸಸೌಧ, ಬೆಂಗಳೂರು-560 001 |
| ಎಂಬುದರ ಬದಲಿಗೆ | | |
| ಸುಧಾರಣೆ ಶಾಖೆ | ಲೆಕ್ಕಾಧಿಕಾರಿ-1, ಸುಧಾರಣೆ ಶಾಖೆ, ಕೊಠಡಿ ಸಂಖ್ಯೆ:225, 2ನೇ ಮಹಡಿ, ವಿಕಾಸಸೌಧ, ಬೆಂಗಳೂರು-560 001 | ಲೆಕ್ಕಾಧಿಕಾರಿ-2, ಸುಧಾರಣೆ ಶಾಖೆ, ಕೊಠಡಿ ಸಂಖ್ಯೆ:225, 2ನೇ ಮಹಡಿ, ವಿಕಾಸಸೌಧ, ಬೆಂಗಳೂರು-560 001 |
| ಎಂದು ತಿದ್ದಿ ಓದಿಕೊಳ್ಳತಕ್ಕದ್ದು | | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜೆ. ಸಂಪತ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.1169

**OFFICE OF THE ASSISTANT COMMISSIONER OF COMMERCIAL TAXES, LOCAL VAT OFFICE-045, BANGALORE**

**(Notified Authority under Rule 6(i) of the CST (Karnataka) Rule 1957)**

**TIN:29140200240, Dated:14th July, 2010**

| Sl. No. | Name of the declaration Form declared obsolete and invalid No. | Name & Address of the dealer to whom forms were issued by Dept. | To whom the forms were issued by the dealer | Date from which declared obsolete and reasons | Name of the Circle issuing the Form | Remarks |
|---|---|---|---|---|---|---|
| 1. | Form C bearing No. bearing No.KA-C/010059795 duly filled in original duplicate & triplicate relating to the period from 10.05.2006 to 28.06.2006 value Rs.27,82,219/- | M/s Nike India Pvt.Ltd., 701, Millenia Tower B, Murphy road, Ulsoor, Bangalore-8 | M/s Dhruva Globals Ltd., 14, Milestone, Delhi Mathura Road, Faridabad, Haryana | 15.05.2010 | LVO-045, Bangalore | C Form was lost in the custody of selling dealer old Faridabad and intimated accordingly. |
| 2. | Form C bearing No. bearing No.KA-C/010059796 duly filled in original duplicate & triplicate relating to the period from 06.07.2006 to 27.09.2006 value Rs.1,19,24,411/- | M/s Nike India Pvt.Ltd., 701, Millenia Tower B, Murphy road, Ulsoor, Bangalore-8 | M/s Dhruva Globals Ltd., 14, Milestone, Delhi Mathura Road, Faridabad, Haryana | 15.05.2010 | LVO-045, Bangalore | C Form was lost in the custody of selling dealer old Faridabad and intimated accordingly. |
| 3. | Form C bearing No. bearing No.KA-C/010059797 duly filled in original duplicate & triplicate relating to the period from 02.10.2006 to 29.12.2006 value Rs.98,61,045/- | M/s Nike India Pvt.Ltd., 701, Millenia Tower B, Murphy road, Ulsoor, Bangalore-8 | M/s Dhruva Globals Ltd., 14, Milestone, Delhi Mathura Road, Faridabad, Haryana | 15.05.2010 | LVO-045, Bangalore | C Form was lost in the custody of selling dealer old Faridabad and intimated accordingly. |

Assistant Commissioner of Commercial Taxes, L.V.O-045, Bangalore.

PR-1151

**PROCEDINGS OF THE ASSISTANT COMMISSIONER OF COMMERCIAL TAXES, (LOCAL VAT OFFICE-270), MANGALORE, DATED:15TH JULY, 2010**

Present: A.M. Somashekhariah,
ACCT (LVO-270), Mangalore.

**Subject:** Loss of One "C" Form in case of M/s Gurudev Poly Print, House of Gurudev Building, 2nd Floor, Lalbagh, Mangalore-575003.

**Read:** Letter Dated:02.07.2010 of M/s Gurudev Poly Print, House of Gurudev Building, 2nd Floor, Lalbagh, Mangalore-575003.

**Preamble:**

M/s Gurudev Poly Print, House of Gurudev Building, 2nd Floor, Lalbagh, Mangalore-575003 is a registered dealer borne on the files of this office bearing TIN No.29890064949. The dealer in his letter cited at read above has intimated that one "C" Forms bearing Sl.No.KA-CA-493597 issued by this office are lost in transit on the way of office or in the office itself.

M/s. Gurudev Poly Print, House of Gurudev Building, 2nd Floor, Lalbagh, Mangalore-575003 has produced the proof for having filed the complaint to Police Authorities and executed indemnity bond Dated:28.06.2010 in favour of the Government as laid down under Rule 12(2) and 12(9) of CST Act 1956.

Since the One filled "C" Forms bearing Sl.No.KA-CA- 493597 are to be treated as lost in transit and are to be treated as invalid. Hence this order.

**Order No.ACCT/LVO-270/CR-/2009-10, Dated:**

In view of the Circumstances explained above the filled one "C" Forms bearing Sl.No. KA-CA 493597 issued by this office on 23.11.2009 are treated as lost in transit between Mangalore City.

**A.M. SOMASHEKHARIAHA**
Assistant Commissioner of Commercial
Taxes, Local Vat Office-270, Mangalore.

**OFFICE OF THE ASSISTANT COMMISSIONER OF COMMERCIAL TAXES,**
**LOCAL VAT OFFICE-270, MANGALORE**

**NOTIFICATION**

**Notified Authority Under Rule 6(i) of the CST (Karnataka) Rules 1957**

**No.ACCT/LVO-270/CR-/ 09-10, Dated:**

By virtue of the provisions of Rule 12(2) of the CST (Registration & turnover) Rules 1957 and Rule 6(e) and 6(i) of CST (Karnataka) Rules 1957, it is hereby notified for general information that the declarations in Form-C described below is declared to be lost while in transit.

| Sl. No. | Number (including code No.) of declaration Forms Lost/ Destroyed or stolen | Name and address of the dealer to whom declaration Forms/ is/are issued by the department, with date of "C" Form issue | Registration Certificate No. of the dealer under CST Act 1956 | The Address of the dealer to whom the declaration is/are sent | Date of issue of Forms by the dealer | Whether Lost/ Stolen/ Destroyed | Remarks |
|---|---|---|---|---|---|---|---|
| 1. | "C" Forms No.KA-CA 493597 | M/s. Gurudev Poly Print House of Gurudev Building, Lalbagh, Mangalore. | TIN: 29890064949 | Reliance Industries Limited village Mora, Post Bhatha, Dist: Surat, Gujarat. | 13.07.2009 | Lost | Bill No.121356/ 13/07/2009 Rs.1146517/- Particulars of Invoices entered in the Lost C Form |

**A.M. SOMASHEKHARIAHA**
PR-1165 Assistant Commissioner of Commercial
Taxes, Local Vat Office-270, Mangalore.

**PROCEEDINGS OF THE ASSISTANT COMMISSIONER OF COMMERCIAL TAXES,**
**LOCAL VAT OFFICE-065, BANGALORE**

**Present:** Gangadharaiah

Asst. Commissioner of Commercial Taxes (LVO-065)

**Subject:** Loss of "C" Form in case of M/s. Bharat Electronics Limited.

**Reference:** Letter Dated:28.07.2010.

**Preamble:**

M/s. Bharat Electronics Limited (A Government of India Enterprises, Ministry of Defence) Jalahalli Post, Bangalore-560013 is a registered dealer both under the provisions of KVAT Act-2003 and CST Act 1956 borne on the files of this office bearing TIN No.29290058392. The company in its letter cited at reference has intimated that one leaf of "C" Form bearing No.1191694 issued by Garden Reach Shipbuilders & Engineers Ltd., Kolkata, 700024 for Rs.43248022 is lost in transit.

The assesee company has produced the proof for having filed the complaint to police authorities for loss of above said "C" Form and executed Indemnity Bond in favour of the Government as laid down under rule 12(2) of CST (R & T) of Rules-57. Since the said C Form stated to be lost in transit, the form so lost is treated as invalid. Hence, this order.

**ORDER NO. ACCT/LVO-065/2010-11, DATED:2$^{ND}$ AUGUST, 2010**

In view of the circumstances explained above the said 'C' Form treated as invalid with immediate effect.

Assistant Commissioner of Commercial
Taxes, (LVO-065), Bangalore.

**OFFICE OF THE ACCT LVO-065, BANGALORE**

**Notified Authority Under the Rule 6(j) of the CST (Karnataka) Rules 1957**

**NOTIFICATION**

**No.ACCT/LVO-065/ 2010-11, Dated:2$^{nd}$ August, 2010**

By virtue of provisions under Rule 12(2) of the CST (Registration & Turnover) Rules 1957 and Rule 6(e) & 6(j) of the CST (Karnataka) Rules 1957, it is hereby notified for general information that the declaration Form-C shown below is declared to be obsolete and invalid.

| Sl. No. | Number (including code No.) of declaration Forms Lost/ Destroyed or stolen | Name and address of the selling dealer who have lost 'C' declaration Form | Registration Certificate No. of the dealer under CST Act 1956 | Name & Address of the dealer from whom 'C' form is/ are received | Date of issue of Form/s by the dealer | Whether Lost/ Stolen/ Destroyed | Remarks |
|---|---|---|---|---|---|---|---|
| 1. | 95 C 1191694 | M/s. Bharat Electronics Limited (A Govt. of India Enterprises, Ministry of Defence) Jalahalli Post, Bangalore-560013. | 29290058392 | Garden Reach Ship Builders & Engineers Ltd., Kolkata-700024. | 18.08.2008 | Lost | Rs.43248022 |

Assistant Commissioner of Commercial
Taxes, (LVO-065), Bangalore.

PR-1192

**DEPARTMENT OF COMMERCIAL TAXES**

**Office of the Commissioner of Commercial Taxes, VTK-1, Gandhinagar, Bangalore**

**NOTIFICATION**

**No.JDN/CR-24-A/10-11, Bangalore, Dated:19th July, 2010**

In exercise of the powers conferred by Section 2-B of the Karnataka Entertainments Tax Act, 1958 read with Rule 3(g) of the Karnataka Entertainments Tax Rules, 1959, it is hereby notified that the Commercial Tax Officer (Enforcement)-19, South Zone, Bangalore shall be the Entertainment Tax Officer under the said Act in the case of M/s. Royal Challengers Sports (P) Ltd., U.B. City, Bangalore for the purposes of the assessment for the periods from March-12th 2010 to April 22nd, 2010.

**PRADEEP SINGH KHAROLA**

PR-1171 Commissioner of Commercial Taxes,

(Karnataka), Bangalore.

**DEPARTMENT OF COMMERCIAL TAXES**

**Office of the Commissioner of Commercial Taxes, VTK-1, Gandhinagar, Bangalore**

**NOTIFICATION**

**No.JDN/CR-47/10-11, Bangalore, Dated:19th July, 2010**

In exercise of the powers conferred by Section 2-B of the Karnataka Entertainments Tax Act, 1958 read with Rule 3(g) of the Karnataka Entertainments Tax Rules, 1959, it is hereby notified that the Commercial Tax Officer (Enforcement)-20, South Zone, Bangalore shall be the Entertainment Tax Officer under the said Act in the case of M/s. Innovative Film City, Plot No.24/26, KIADB, Bidadi, Ramanagaram District for the purposes of the assessment for the periods from April 2008 to March, 2010.

**PRADEEP SINGH KHAROLA**

PR-1172 Commissioner of Commercial Taxes,

(Karnataka), Bangalore.

**DEPARTMENT OF COMMERCIAL TAXES**

**Office of the Commissioner of Commercial Taxes, VTK-1, Gandhinagar, Bangalore**

**NOTIFICATION**

**No.JDN/CR-58/10-11, Bangalore, Dated:19th July, 2010**

In exercise of the powers conferred by Section 2-B of the Karnataka Entertainments Tax Act, 1958 read with Rule 3(g) of the Karnataka Entertainments Tax Rules, 1959, it is hereby notified that the Commercial Tax Officer (Enforcement)-19, South Zone, Bangalore shall be the Entertainment Tax Officer under the said Act in the case of M/s. Hathway Cable and Datacom Limited, St. John's Road, Bangalore-560042 for the purposes of the assessment for the periods from April 2006 to June, 2010.

**PRADEEP SINGH KHAROLA**

PR-1173 Commissioner of Commercial Taxes,

(Karnataka), Bangalore.

**ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ**

**ಸಂಖ್ಯೆ: ಸಿಐ 385 ಎಸ್‌ಪಿಕ್ಯೂ 2010, ಬೆಂಗಳೂರು, ದಿನಾಂಕ:15ನೇ ಜುಲೈ, 2010**

**ಕಲಂ 4ರ ಕೆಳಗೆ ಕೈಬಿಡುವ ಅಧಿಸೂಚನೆ**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 (ಕರ್ನಾಟಕ ಕಾಯ್ದೆ 18:1966)ರ ಕಲಂ 28ರ ಉಪ ಕಲಂ 1 ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 54 ಎಸ್‌ಪಿಕ್ಯೂ 91 ದಿನಾಂಕ:21.03.1992 ನೇದ್ದು ಕರ್ನಾಟಕ ರಾಜ್ಯ ಪತ್ರದ ಭಾಗ

3–1ರ ಪುಟ ಸಂಖ್ಯೆ 78ರಲ್ಲಿ ಪ್ರಕಟಗೊಂಡ ಈ ಕೆಳಗಿನ ಅನುಸೂಚಿಯಲ್ಲಿ ಕಾಣಿಸಿರುವ ಉತ್ತರ ಕನ್ನಡ ಜಿಲ್ಲೆ, ಕಾರವಾರ ತಾಲ್ಲೂಕು ಕಣಿಕೋಣ ಗ್ರಾಮದ ಜಮೀನು ಅದರ ಕ್ಷೇತ್ರವನ್ನು ಅಂಕಣ 2 ರಿಂದ 7 ರವರೆಗೆ ವಿವರಿಸಿದ ಪರಿಮಿತಿಯೊಂದಿಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 4 ರನ್ವಯ ವಿಹಿತವಾಗಿರುವ ಅಧಿಕಾರದ ಮೇರೆಗೆ "ಕೈಗಾರಿಕಾ ಪ್ರದೇಶದಿಂದ" ಕೈಬಿಡಲಾಗಿದೆ ಅಂತಾ ಕರ್ನಾಟಕ ಸರ್ಕಾರವು ಈ ಮೂಲಕ ಘೋಷಿಸುತ್ತದೆ.

**ಅನುಸೂಚಿ**

**ಗ್ರಾಮ: ಕಣಿಕೋಣ** **ತಾಲ್ಲೂಕು: ಕಾರವಾರ** **ಜಿಲ್ಲೆ: ಉತ್ತರಕನ್ನಡ**

| ಅ. ನಂ. | ಸ.ನಂ. | ಕ್ಷೇತ್ರ ಎ.ಗುಂ.ಆ | ಚಕ್ ಬಂದಿ (ಚತು:ಸೀಮೆ) 28(1)ರ ಅಧಿಸೂಚನೆ ಪ್ರಕಾರ | | | |
|---|---|---|---|---|---|---|
| | | | **ಪೂರ್ವ** | **ಪಶ್ಚಿಮ** | **ಉತ್ತರ** | **ದಕ್ಷಿಣ** |
| 1. | 136/1 | 4–37–00<br>0–02–00ಖ<br>4–35–00 | ಸ.ನಂ.137ರ ಪೈಕಿ ಜಮೀನು | ಸ.ನಂ.129, 130, 134, 135 | ಸುರಕೇರಿ ಗ್ರಾಮದ ಗಡಿಯ ಸ.ನಂ.34, 35, 36 | ಸ.ನಂ.37ರ ಪೈಕಿ ಜಮೀನು |
| 2. | 136/2 | 4–37–00<br>0–02–00ಖ<br>4–35–00 | ಸದರ | ಸದರ | ಸದರ | ಸದರ |
| 3. | 136/2 | 4–37–00<br>0–02–00ಖ<br>4–35–00 | ಸದರ | ಸದರ | ಸದರ | ಸದರ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಹೆಚ್. ಶೇಷಗಿರಿ**

ಪಿ.ಆರ್.1178

ಸರ್ಕಾರದ ಅಧೀನ ಕಾರ್ಯದರ್ಶಿ (ಕೈಅ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**OFFICE OF THE DEPUTY COMMISSIONER, SHIMOGA DISTRICT, SHIMOGA**

**NOTIFICATION**

**No.MAG(1)CR.32/10-11, Dated:31st July, 2010**

In exercise of the powers conferred on me under the provision of sub-Section (b) of Section 4 of the Karnataka Treasure Trove Act 1962, I, A.B. Hemachandra, Deputy Commissioner, Shimoga District, do hereby notify for the information of those interested, that a treasure trove has been found in the premises bearing G.P. Assessment No.130/3 of Mulubagilu Village, Tirthahalli Taluk, belonging to Kannan Jayaram R/o Bangalore. (Khata stands in the Name of Vishwanatha Shastry, ganesh Shastry S/o Naga Shastry) The particulars are furnished below and that any person claiming the treasure or any part there of should appear personally or by authorised agent before the under signed at 3.00 pm on 27.12.2010 and put forth their claims if any.

| Sl. No. | Nature of treasure | Qty | Weight KG/ Grams | Apprx Values |
|---|---|---|---|---|
| 1. | Brass Grain bowls | 13 | 1-400 | |
| 2. | Copper vessels (Pancha patre) | 7 | 2-350 | |
| 3. | Brass bowls (Rangoli) | 3 | 0-810 | |
| 4. | Copper Vessels (Bindige) | 1 | 0-350 | |

| Sl. No. | Nature of treasure | Qty | Weight KG/ Grams | Apprx Values |
|---|---|---|---|---|
| 5. | Brass Vessels (Bindige) | 7 | 0-500 | |
| 6. | Brass bowls (Kumkum) | 1 | 0-350 | |
| 7. | Brass Oil bowl | 10 | 0-880 | |
| 8. | Brass bowl (Deepa) | 2 | 0-250 | |
| 9. | Brass bowl (Deepa) | 1 | 0-100 | |
| 10. | Small Iron Plate | 1 | 0-120 | |
| 11. | Small Brass (Deepa Sodaru) | 20 | 1-125 | |
| 12. | Small Brass bowls (Gandha) | 7 | 0-130 | |
| 13. | Brass (Hanate) | 1 | 0-75 | |
| 14. | Brass Oil Bowl | 2 | 0-450 | |
| 15. | Brass Hanging bowl | 1 | 0-40 | |
| | **Total** | **77** | **8-930** | **Rs.8955/-** |

Date on which the treasure was found-14-7-2010

Place at which the treasure was found-G.P. Khata No.130/3 of Mulubagilu village Durvasapura Majre, thirthahalli Taluk.

**A.B. HEMACHANDRA**
Deputy Commissioner,
Shimoga District, Shimoga.

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕಟಣೆ**

**ಕ್ರ.ಸಂ.ಎಂಎಜಿ(1).ವಿವ.32/10–11, ದಿನಾಂಕ:31ನೇ ಜುಲೈ, 2010**

1962ರ ಕರ್ನಾಟಕ ನಿಕ್ಷೇಪ ನಿಧಿ ಕಾಯ್ದೆಯ ನಿಬಂಧನೆ 4(ಬಿ) ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿವಮೊಗ್ಗ ಜಿಲ್ಲಾಧಿಕಾರಿ, ಎ.ಬಿ. ಹೇಮಚಂದ್ರ ಆದ ನಾನು, ಹಿತಾಸಕ್ತಿಯುಳ್ಳ ವ್ಯಕ್ತಿಗಳಿಗೆ ಈ ಮೂಲಕ ತಿಳಿಸುವುದೇನೆಂದರೆ ತೀರ್ಥಹಳ್ಳಿ ತಾಲ್ಲೂಕು ಮುಳುಬಾಗಿಲು ಗ್ರಾಮದ ಮಜರೆ ದೂರ್ವಾಸಪುರದ ವಿಶ್ವನಾಥಶಾಸ್ತ್ರಿ, ಗಣೇಶ ಶಾಸ್ತ್ರಿ ಬಿನ್ ನಾಗಶಾಸ್ತ್ರಿ ಇವರಿಗೆ ಸೇರಿದ ಗ್ರಾಮ ಪಂಚಾಯತ್ ಖಾತೆ ನಂ.130/3ರಲ್ಲಿನ ಹಳೆ ಮನೆಯ ಗೋಡೆಯ ಮಧ್ಯದಲ್ಲಿ ಈ ಕೆಳಕಂಡ ನಿಧಿ ನಿಕ್ಷೇಪವು ಸಿಕ್ಕಿದ್ದು, ಈ ಸಂಬಂಧವಾಗಿ ಹಿತಾಸಕ್ತಿಯುಳ್ಳವರು ಸಿಕ್ಕಿರುವ ನಿಧಿ ನಿಕ್ಷೇಪದ ಮೇಲೆ ತಮ್ಮ ಹಕ್ಕು ಸಾಧಿಸುವುದಿದ್ದಲ್ಲಿ ದಿನಾಂಕ:27.12.2010ರಂದು ಅಪರಾಹ್ನ 3–00 ಗಂಟೆಗೆ ಖುದ್ದಾಗಿ ಆಗಲಿ ಅಥವಾ ತಮ್ಮ ಪ್ರತಿನಿಧಿಯ ಮೂಲಕವಾಗಲೀ ಹಾಜರಾಗಿ ತಮ್ಮ ಹಕ್ಕನ್ನು ಪ್ರತಿಪಾದಿಸತಕ್ಕದ್ದು.

| ಕ್ರ.ಸಂ. | ನಿಧಿಯ ವಿವರ | ಸಂಖ್ಯೆ | ತೂಕ ಕೆ.ಜಿ. ಗ್ರಾಂ | ಅಂದಾಜು ಮಾರುಕಟ್ಟೆ ಬೆಲೆ ರೂ.ಗಳಲ್ಲಿ |
|---|---|---|---|---|
| 1. | ಹಿತ್ತಾಳೆ ಧಾನ್ಯದ ಬಟ್ಟಲುಗಳು | 13 | 1–400 | |
| 2. | ಪಂಚ ಪಾತ್ರೆ ತಾಮ್ರದ್ದು | 7 | 2–350 | |
| 3. | ಹಿತ್ತಾಳೆ ರಂಗೋಲಿ ಬಟ್ಟಲು | 3 | 0–810 | |
| 4. | ಪುಟ್ಟ ತಾಮ್ರದ ಬಿಂದಿಗೆ | 1 | 0–350 | |
| 5. | ಹಿತ್ತಾಳೆ ಪುಟ್ಟ ಬಿಂದಿಗೆಗಳು | 7 | 0–500 | |

| ಕ್ರ.ಸಂ. | ನಿಧಿಯ ವಿವರ | ಸಂಖ್ಯೆ | ತೂಕ ಕೆ.ಜಿ. ಗ್ರಾಂ | ಅಂದಾಜು ಮಾರುಕಟ್ಟೆ ಬೆಲೆ ರೂ.ಗಳಲ್ಲಿ |
|---|---|---|---|---|
| 6. | ಹಿತ್ತಾಳೆ ಕುಂಕುಮ ಬಟ್ಟಲುಗಳು | 1 | 0–350 | |
| 7. | ಹಿತ್ತಾಳೆ ಎಣ್ಣೆ ಬಟ್ಟಲು | 10 | 0–880 | |
| 8. | ದೀಪದ ಬಟ್ಟಲು | 2 | 0–250 | |
| 9. | ಹತ್ತಿ ದೀಪದ ಬಟ್ಟಲು | 1 | 0–100 | |
| 10. | ಪುಟ್ಟ ಕಬ್ಬಿಣದ ತಟ್ಟೆ | 1 | 0–120 | |
| 11. | ಸಣ್ಣ ಹಿತ್ತಾಳೆ ದೀಪದ ಸೊಡರುಗಳು | 20 | 1–125 | |
| 12. | ಹಿತ್ತಾಳೆ ಗಂಧ ಇಡುವ ಸಣ್ಣ ಬಟ್ಟಲುಗಳು | 7 | 0–130 | |
| 13. | ಹಿತ್ತಾಳೆ ಹಣತೆ | 1 | 0–75 | |
| 14. | ಹಿತ್ತಾಳೆ ಎಣ್ಣೆ ಬಟ್ಟಲು | 2 | 0–450 | |
| 15. | ಹಿತ್ತಾಳೆ ತೂಗು ಬಟ್ಟಲು | 1 | 0–40 | |
| | **ಒಟ್ಟು** | **77** | **8–930** | **ರೂ.8955/–** |

ನಿಧಿಯು ಸಿಕ್ಕ ದಿನಾಂಕ:14.07.2010

ನಿಧಿ ಸಿಕ್ಕ ಜಾಗದ ವಿವರ ಗ್ರಾ.ಪಂ.ಖಾತೆ ನಂ.130/3 ಮುಳುಬಾಗಿಲು ಗ್ರಾಮ (ಮಜರೆ ದೂರ್ವಾಸಪುರ) ತೀರ್ಥಹಳ್ಳಿ ತಾಲ್ಲೂಕು.

**ಎ.ಬಿ. ಹೇಮಚಂದ್ರ**
ಜಿಲ್ಲಾಧಿಕಾರಿ,
ಶಿವಮೊಗ್ಗ ಜಿಲ್ಲೆ.

ಪಿ.ಆರ್–1201

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ

### ಪತ್ರಿಕಾ ಪ್ರಕಟಣೆ

**ಸಂಖ್ಯೆ: ಜಿಸಕಅ:ಡಿ2:ಪಿಆರ್:13:09–10, ದಿನಾಂಕ:27ನೇ ಜುಲೈ, 2010**

**ವಿಷಯ:** 2010–11ನೇ ಸಾಲಿಗೆ ಪರಿಶಿಷ್ಟಜಾತಿ ಕಾನೂನು ಪದವೀಧರರನ್ನು ಆಡಳಿತ ನ್ಯಾಯಾಧೀಕರಣ ತರಬೇತಿ ಆಯ್ಕೆ ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರಿ ಆದೇಶ ಸಂಖ್ಯೆ: ಎಸ್.ಡಬ್ಲ್ಯೂ:ಸಿಆರ್–8 ಇಎಸ್‌ಡಬ್ಲ್ಯೂ–89, ದಿನಾಂಕ:21.11.1990.

2010–11ನೇ ಸಾಲಿಗೆ ಪರಿಶಿಷ್ಟ ಜಾತಿ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿಗಾಗಿ ಆಯ್ಕೆ ಮಾಡಲು ಈ ಕೆಳಕಂಡ ನಿಬಂಧನೆಗಳಿಗೆ ಅನುಗುಣವಾಗಿ ಪರಿಶಿಷ್ಟಜಾತಿಯ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ನಿಗದಿತ ಅರ್ಜಿ ನಮೂನೆಗಳನ್ನು ಕಛೇರಿ ವೇಳೆಯಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ ಕೊಠಡಿ ನಂ.121 ಜಿಲ್ಲಾಡಳಿತ ಭವನ, ಚಾಮರಾಜನಗರ ಇಲ್ಲಿ ಪಡೆಯಬಹುದು. ಮೇಲ್ಕಂಡ ತರಬೇತಿಗೆ ಅರ್ಜಿ ಸಲ್ಲಿಸಬಯಸುವ ಅಭ್ಯರ್ಥಿಗಳು ಕೆಳಕಂಡ ನಿಬಂಧನೆಗಳಿಗನುಸಾರ ಅರ್ಜಿಗಳನ್ನು ದಿನಾಂಕ:16.08.2010ರೊಳಗೆ ಈ ಕಛೇರಿಗೆ ಸಲ್ಲಿಸಲು ಕೋರಲಾಗಿದೆ.

**ನಿಬಂಧನೆಗಳು**

1) ಅಭ್ಯರ್ಥಿಯು ಪರಿಶಿಷ್ಟಜಾತಿ ಕಾನೂನು ಪದವೀಧರನಾಗಿರಬೇಕು ಹಾಗೂ ಅರ್ಜಿ ಸಲ್ಲಿಸುವ ಕಡೆ ದಿನಾಂಕಕ್ಕೆ ಕಾನೂನು ಪದವಿಯಲ್ಲಿ ತೇರ್ಗಡೆಯಾಗಿ ಎರಡು ವರ್ಷಕ್ಕೆ ಮೀರಿರಬಾರದು.

2) ಅರ್ಜಿ ಸಲ್ಲಿಸುವ ಕಾನೂನು ಪದವೀಧರರು 35 ವರ್ಷದೊಳಗಿರಬೇಕು.

3) ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಗೆ ವರದಿ ಮಾಡಿಕೊಂಡ ದಿನದಿಂದ 4 ವರ್ಷಗಳವರೆಗೆ ತರಬೇತಿಯನ್ನು ಪಡೆಯಬೇಕಾಗಿರುತ್ತದೆ. ಹಾಗೂ ತರಬೇತಿ ಅವಧಿಯಲ್ಲಿ ರೂ.1000–00 ಮಾಹೆಯಾನ ಶಿಷ್ಯವೇತನವನ್ನು ಮಂಜೂರು ಮಾಡಲಾಗುವುದು. ಮಧ್ಯದಲ್ಲಿ ತರಬೇತಿ ಬಿಟ್ಟುಹೋದಲ್ಲಿ ಮಂಜೂರು ಮಾಡಿರುವ ಶಿಷ್ಯವೇತನವನ್ನು ಅಂತಹವರಿಂದ ವಸೂಲು ಮಾಡಲಾಗುವುದು.

4) ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಚಾಮರಾಜನಗರ ಜಿಲ್ಲೆಯ ನಿವಾಸಿಗಳಾಗಿರತಕ್ಕದ್ದು.

5) ಜಿಲ್ಲಾ ಮಟ್ಟದ ಆಯ್ಕೆ ಸಮಿತಿ ಮುಖಾಂತರ ತರಬೇತಿಗೆ ಅರ್ಜಿಗಳನ್ನು ಆಯ್ಕೆ ಮಾಡಲಾಗುವುದು.

6) ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ನಿಗದಿತ ಅರ್ಜಿಯೊಡನೆ ತಹಶೀಲ್ದಾರ್ ರವರಿಂದ ಪಡೆದ ಜಾತಿ ದೃಢೀಕರಣಪತ್ರ, ವರಮಾನ ದೃಢೀಕರಣ, ಕಾನೂನು ಪದವಿ ಅಂಕಪಟ್ಟಿಗಳು, ಪದವಿ ಪತ್ರ, ಬಾರ್ ಕೌನ್ಸಿಲ್ ನೊಂದಣಿ ಪತ್ರದ ದೃಢೀಕರಣ ಪತ್ರಗಳನ್ನು ಸಲ್ಲಿಸಬೇಕು.

ಮೇಲ್ಕಂಡ ನಿಬಂಧನೆಗೊಳಪಟ್ಟು ಆಸಕ್ತ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ದಿನಾಂಕ:16.08.2010 ರಂದು ಸಂಜೆ 4.00 ಗಂಟೆಯೊಳಗೆ ಈ ಕಛೇರಿಗೆ ಸಲ್ಲಿಸಲು ಕೋರಲಾಗಿದೆ.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ,
ಪಿ.ಆರ್–1205 ಚಾಮರಾಜನಗರ ಜಿಲ್ಲೆ,
ಚಾಮರಾಜನಗರ.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:1464 ಎಎಂಎಲ್ 08: 10–11/ 6995, ದಿನಾಂಕ:2ನೇ ಆಗಸ್ಟ್, 2010**

**ವಿಷಯ:** ಮೆ:ಶ್ರೀ ಬನಶಂಕರಿ ಸ್ಟೀಲ್ಸ್ & ಅಲೋಯ್ಸ್ ಪ್ರೈ.ಲಿ., ರವರು ದಿ:26–08–2008ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಕುಮಾರಸ್ವಾಮಿ ರೇಂಜ್‌ನ 750.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು, ಮ್ಯಾಂಗನೀಸ್ & ಸ್ಪಾಂಜ್ ಐರನ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ: 1464 ಎಎಂಎಲ್ 08/15007–08, ದಿನಾಂಕ 11–02–2010.

2. ಅರ್ಜಿದಾರರ ವಿವರಣೆ ದಿ:23–02–2010.

**ಪ್ರಸ್ತಾವನೆ:**

ಮೆ:ಶ್ರೀ ಬನಶಂಕರಿ ಸ್ಟೀಲ್ಸ್ & ಅಲೋಯ್ಸ್ ಪ್ರೈ.ಲಿ., ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು ಕುಮಾರಸ್ವಾಮಿ ರೇಂಜ್‌ನ 750.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು, ಮ್ಯಾಂಗನೀಸ್ & ಸ್ಪಾಂಜ್ ಐರನ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ: 1464 ಎಎಂಎಲ್ 08 ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಮೆ:NMDC ರವರ ಗ.ಗು.ಸಂ.1111ರ ಪ್ರದೇಶಕ್ಕೆ ಅತಿವ್ಯಾಪ್ತಿಯಾಗುತ್ತಿದೆ. ಈ ಬಗ್ಗೆ ಉಲ್ಲೇಖಿತ ಸೂಚನಾ ಪತ್ರದಲ್ಲಿ ತಿಳಿಸಿ, 30 ದಿನಗಳೊಳಗಾಗಿ ವಿವರಣೆಯನ್ನು ನೀಡುವಂತೆ ಸೂಚಿಸಲಾಗಿತ್ತು. ಉಲ್ಲೇಖ(2)ರಲ್ಲಿ ಅರ್ಜಿದಾರರು ನೀಡಿರುವ ವಿವರಣೆಯಲ್ಲಿ, ತಮ್ಮ ಚಾಲ್ತಿಯಲ್ಲಿರುವ ಸ್ಟೀಲ್ ಘಟಕಕ್ಕೆ ಮುಕ್ತವಿರುವ 10–00 ಎಕರೆ ಪ್ರದೇಶವನ್ನಾದರೂ ಮಂಜೂರು ಮಾಡುವಂತೆ ಕೋರಿರುತ್ತಾರೆ. ಆದರೆ, ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 1464 ಎಎಂಎಲ್ 08ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಪಿ.ಆರ್–1206 ಗಣಿ ಮತ್ತು ಭೂವಿಜ್ಞಾನ ಇಲಾಖೆ,
ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ**

**ವಿಷಯ :** ರಾಮನಗರ ಜಿಲ್ಲೆ ಕನಕಪುರ ತಾಲ್ಲೂಕು ದೊಡ್ಡಗುಳ್ಳಿಗ್ರಾಮದಲ್ಲಿ ಕಪ್ಪು ಗ್ರಾನೈಟ್‌ಗಾಗಿ ||ಮೆ||.ವಿಜಯಲಕ್ಷ್ಮಿ ಗ್ರಾನೈಟ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿಗುತ್ತಿಗೆ ಸಸಂಖ್ಯೆ:657ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.67,503/–ಗಳನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** ಈ ಕಛೇರಿಯ ಅಂತಿಮ ನೋಟೀಸು ಪತ್ರ ಸಂಖ್ಯೆ: ಗಭೂಇ/ಡಿಸಿಬಿ/ಕಗಗು/657/ 141/2009–10 ದಿನಾಂಕ:05.04.2010.

**ಪ್ರಸ್ತಾವನೆ:**

ರಾಮನಗರ ಜಿಲ್ಲೆ ಕನಕಪುರ ತಾಲ್ಲೂಕು ದೊಡ್ಡಗುಳ್ಳಿ ಗ್ರಾಮದ ಸರ್ವೆ ನಂ.22 ರಲ್ಲಿ ಮೆ॥ ವಿಜಯಲಕ್ಷ್ಮಿ ಗ್ರಾನೈಟ್ಸ್ ರವರಿಗೆ 2.09 ಎಕರೆಗೆ ದಿ:08.06.2004 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 657 ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಉಲ್ಲೇಖಿತ ಪತ್ರದಂತೆ ಅಂತಿಮ ನೋಟೀಸನ್ನು ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರನೀಡಿ 2009ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.67,503/–ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಡಿ ನೋಟೀಸು ಜಾರಿಗೊಳಿಸಲಾಗಿತ್ತು. ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟಿಸಿಗೆ ಯಾವ ರೀತಿಯು ಸ್ಪಂದಿಸಿಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂ.ಆರ್.ಸಿ. 92 ದಿನಾಂಕ:02.07.1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:657ನ್ನು ರದ್ದುಪಡಿಸುವ ಕ್ರಮ ಜರುಗಿಸುವುದು ಆವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ**

**ಆದೇಶ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/657/20–/6850, ದಿನಾಂಕ:2ನೇ ಆಗಸ್ಟ್, 2010**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ರಾಮನಗರ ಜಿಲ್ಲೆ ಕನಕಪುರ ತಾಲ್ಲೂಕು ದೊಡ್ಡಗುಳ್ಳಿ ಗ್ರಾಮದ ಸರ್ವೆ ನಂ. 22ರಲ್ಲಿ 2.09 ಎಕರೆಗೆ ಕಪ್ಪು ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:657 ರ ಮೇಲಿನ ರಾಜಧನ ಬಾಕಿ ಪಾವತಿಸದೇ ಇರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂವಿಜ್ಞಾನ ಇಲಾಖೆ,
ಬೆಂಗಳೂರು.

ಪಿ.ಆರ್–1207

**ಕರ್ನಾಟಕ ವಿಧಾನ ಪರಿಷತ್ತು**

**ವಿಧಾನ ಪರಿಷತ್ತಿನ ಸಚಿವಾಲಯ, ಅಂಚೆ ಪೆಟ್ಟಿಗೆ ಸಂಖ್ಯೆ:5079, ವಿಧಾನಸೌಧ, ಬೆಂಗಳೂರು–560 001**

**ಸಂಖ್ಯೆ: ಕವಿಪ/ಶಾರಶಾ/138/ಇತರೆ/2008, ಬೆಂಗಳೂರು, ದಿನಾಂಕ:30ನೇ ಜುಲೈ, 2010**

**ವಿಷಯ:** ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಶ್ರೀನಿವಾಸ ವಿ. ಮಾನೆ ಇವರ ವಿಳಾಸ ಬದಲಾವಣೆಯ ಬಗ್ಗೆ.

ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ಶ್ರೀನಿವಾಸ ವಿ. ಮಾನೆ ರವರ ಹೆಸರಿಗೆ ಕಳುಹಿಸುವ ಎಲ್ಲಾ ಪತ್ರ ಹಾಗೂ ಮಾಹಿತಿಗಳನ್ನು ಈ ಕೆಳಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಿರುವ ಹಿನ್ನಲೆಯಲ್ಲಿ, ವಿಳಾಸ ಬದಲಾವಣೆ ಬಗ್ಗೆ ರಾಜ್ಯ ಪತ್ರದಲ್ಲಿ ಪ್ರಕಟಿಸಿ ಎಲ್ಲಾ ಇಲಾಖೆಗಳ ಮಾಹಿತಿಗಾಗಿ ರವಾನಿಸಲು ಕ್ರಮ ಕೈಗೊಳ್ಳಬೇಕೆಂದು ಕೋರಲು ನಿರ್ದೇಶಿತನಾಗಿದ್ದೇನೆ.

ಶ್ರೀ ಶ್ರೀನಿವಾಸ ವಿ. ಮಾನೆ
ವಿಧಾನ ಪರಿಷತ್ತಿನ ಸದಸ್ಯರು,
# 60, ಆದರ್ಶನಗರ, ಹುಬ್ಬಳ್ಳಿ–580 030.

**ಎನ್. ಬಾಲಗುರು**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತು.

ಪಿ.ಆರ್–1211

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:1588 ಎಎಂಎಲ್ 08:10–11/4010, ದಿನಾಂಕ:4ನೇ ಆಗಸ್ಟ್, 2010**

**ವಿಷಯ:** ಶ್ರೀ ಎಸ್.ಎಂ.ಬಾಷಾ ರವರು ದಿನಾಂಕ:30–09–2008ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಚಿಕ್ಕಂತಾಪುರ ಗ್ರಾಮದ 300.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:1588 ಎಎಂಎಲ್ 08/15055–56, ದಿನಾಂಕ 11–02–2010.

2. ಅರ್ಜಿದಾರರ ವಿವರಣೆ ದಿ:22–03–2010.

**ಪ್ರಸ್ತಾವನೆ:**

ಶ್ರೀ ಎಸ್.ಎಂ.ಬಾಷಾ ರವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಚಿಕ್ಕಂತಾಪುರ ಗ್ರಾಮದ 300.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ: 1588 ಎಎಂಎಲ್ 08 ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಅತಿವ್ಯಾಪ್ತಿಯಾಗುತ್ತಿರುವ ಬಗ್ಗೆ ಉಲ್ಲೇಖ(1)ರ ಈ ಕಛೇರಿ ಸೂಚನಾ ಪತ್ರದಲ್ಲಿ ತಿಳಿಸಿ, 30 ದಿನಗಳೊಳಗಾಗಿ ವಿವರಣೆಯನ್ನು ನೀಡುವಂತೆ ಸೂಚಿಸಲಾಗಿತ್ತು. ಉಲ್ಲೇಖ(2) ರಲ್ಲಿ ಅರ್ಜಿದಾರರು ನೀಡಿರುವ ವಿವರಣೆಯಲ್ಲಿ, ಸದರಿ ಪ್ರದೇಶವು ವಿಸ್ತಾರವಾದ ಪ್ರದೇಶವಾಗಿದ್ದು, ತಮಗೂ ಮಂಜೂರಾತಿ ನೀಡಿ, ಗಣಿಗಾರಿಕೆ ಮಾಡಲು ಅವಕಾಶ ಮಾಡಿಕೊಡುವಂತೆ ಕೋರಿರುತ್ತಾರೆ. ಆದರೆ, ಮತ್ತೊಮ್ಮೆ ಪರಿಶೀಲಿಸಲಾಗಿ, ಸದರಿ ಅಪೇಕ್ಷಿತ ಪ್ರದೇಶದ ಮುಕ್ತತೆಯ ಬಗ್ಗೆ ಖಚಿತಪಡಿಸಿಕೊಂಡಿದ್ದು, ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 1588 ಎಎಂಎಲ್ 08ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂವಿಜ್ಞಾನ ಇಲಾಖೆ,
ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:141 ಎಎಂಎಲ್ 08: 10–11/4016, ದಿನಾಂಕ:4ನೇ ಆಗಸ್ಟ್, 2010**

**ವಿಷಯ:** ಮೆ: ಶ್ರೀ ಸಾಯಿ ಎಂಟರ್ ಪ್ರೈಸಸ್ ರವರು ದಿ:31–01–2008ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ರಮಣದುರ್ಗ ಗ್ರಾಮದ 110.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು & ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:141 ಎಎಂಎಲ್ 08/4485–86, ದಿನಾಂಕ 17–02–2010.

2. ಅರ್ಜಿದಾರರ ವಿವರಣೆ ದಿ:17–05–2010.

**ಪ್ರಸ್ತಾವನೆ:**

ಮೆ: ಶ್ರೀ ಸಾಯಿ ಎಂಟರ್ ಪ್ರೈಸಸ್ ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು ರಮಣದುರ್ಗ ಗ್ರಾಮದ 110.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು & ಮ್ಯಾಂಗನೀಸ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ: 141 ಎಎಂಎಲ್ 08 ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಹಲವು ಗಣಿಗುತ್ತಿಗೆ ಪ್ರದೇಶಗಳಿಗೆ ಮತ್ತು ಪೂರ್ವ ಅರ್ಜಿಗಳ ಪ್ರದೇಶಕ್ಕೆ ಅತಿವ್ಯಾಪ್ತಿಯಾಗುತ್ತಿದೆ. ಈ ಬಗ್ಗೆ ಉಲ್ಲೇಖಿತ ಸೂಚನಾ ಪತ್ರದಲ್ಲಿ ತಿಳಿಸಿ, 30 ದಿನಗಳೊಳಗಾಗಿ ವಿವರಣೆಯನ್ನು ನೀಡುವಂತೆ ಸೂಚಿಸಲಾಗಿತ್ತು. ಉಲ್ಲೇಖ(2)ರಲ್ಲಿ ಅರ್ಜಿದಾರರು ನೀಡಿರುವ ವಿವರಣೆಯಲ್ಲಿ, ಅತಿವ್ಯಾಪ್ತಿಯಾಗುವ ಅರ್ಜಿಗಳ ಸಂಯುಕ್ತ ನಕಾಶೆಯನ್ನು ಕೋರಿದ್ದಾರೆ. ಸಂಯುಕ್ತ ನಕಾಶೆಯನ್ನು ಪೂರೈಸುವ ವ್ಯವಸ್ಥೆ

ಇರುವುದಿಲ್ಲ. ಮುಂದುವರಿದು ಅರ್ಜಿದಾರರು ತಮಗೆ ತಿಳಿದಂತೆ ಸದರಿ ಪ್ರದೇಶವು ಮುಕ್ತವಾಗಿದೆಯೆಂದೂ, ತಮಗೆ ಸದರಿ ಪ್ರದೇಶಕ್ಕೆ ಮಂಜೂರಾತಿ ನೀಡಿ, ಗಣಿಗಾರಿಕೆ ಮಾಡಲು ಅವಕಾಶ ಮಾಡಿಕೊಡುವಂತೆ ಕೋರಿರುತ್ತಾರೆ. ಆದರೆ, ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 141 ಎಎಂಎಲ್ 08ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂವಿಜ್ಞಾನ ಇಲಾಖೆ,
ಬೆಂಗಳೂರು.

ಪಿ.ಆರ್–1216

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:100 ಎಪಿಎಲ್ 95: 10–11/4018, ದಿನಾಂಕ:4ನೇ ಆಗಸ್ಟ್, 2010**

**ವಿಷಯ:** ಶ್ರೀ ಎಸ್.ಅಹಮದ್ ಹುಸೇನ್ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, R.M. Block ವೆಂಕಟಗಿರಿ ಗ್ರಾಮದ 127.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಖನಿಜಾನ್ವೇಷಣಾ ಲೈಸೆನ್ಸ್ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ಸೂಚನ ಪತ್ರ ಸಂಖ್ಯೆ:ಗಭೂಇ:ಗಗುಶಾ:100 APL 95/ ದಿ:28–05–2010.
2. ಅರ್ಜಿದಾರರ ಪತ್ರ ದಿನಾಂಕ:11–06–2010.

**ಪ್ರಸ್ತಾವನೆ:**

ಶ್ರೀ ಎಸ್.ಅಹಮದ್ ಹುಸೇನ್ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, R.M. Block ವೆಂಕಟಗಿರಿ ಗ್ರಾಮದ 127.00ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ಮ್ಯಾಂಗನೀಸ್ ಖನಿಜಕ್ಕಾಗಿ ಅನ್ವೇಷಣಾ ಲೈಸೆನ್ಸ್ ಕೋರಿ ಸಲ್ಲಿಸಿರುವ ಅರ್ಜಿ ಸಂಖ್ಯೆ:100 ಎಪಿಎಲ್ 95ನ್ನು ಪರಿಶೀಲಿಸಿದೆ.

ಅರ್ಜಿದಾರರಿಗೆ ಉಲ್ಲೇಖ (1)ರ ಈ ಕಛೇರಿ ಸೂಚನ ಪತ್ರಕ್ಕೆ ಅರ್ಜಿದಾರರು ಉಲ್ಲೇಖ(2)ರ ಪತ್ರದಲ್ಲಿ ಉತ್ತರಿಸುತ್ತಾ, ದಿ:21–08–1995ರಂದು Prospecting licence ಗಾಗಿ ಸದರಿ ಪ್ರದೇಶಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ದಿನಾಂಕ:20–02–2006 ರಂದು ತಮ್ಮ PL ಅರ್ಜಿಯನ್ನು ML ಅರ್ಜಿಯೆಂದು ಪರಿಗಣಿಸಿ, ಮುಂದುವರಿಸಲು ಕೋರಿದ್ದು, ನಿಯಮಗಳಡಿಯಲ್ಲಿ PL ಅರ್ಜಿಯನ್ನು ML ಅರ್ಜಿಯೆಂದು ಪರಿಗಣಿಸಲು ಬರುವುದಿಲ್ಲ. ಅಲ್ಲದೇ PL ಮಂಜೂರಾತಿಗೆ ಕೋರಿದ ವೆಂಕಟಗಿರಿ ಪ್ರದೇಶವು ಗಣಿಗಾರಿಕೆಗೆ ಗೊತ್ತಾದ ಪ್ರದೇಶವಾಗಿದ್ದು, ಸದರಿ ಪ್ರದೇಶಕ್ಕೆ ಸಾಕಷ್ಟು ಗಣಿಗುತ್ತಿಗೆ ಅರ್ಜಿಗಳು ಇರುತ್ತವೆ. ಕಾರಣ ಖನಿಜಾನ್ವೇಷಣೆ ಮಾಡುವ ಅಗತ್ಯ ಕಂಡುಬರುವುದಿಲ್ಲ. ಆದ್ದರಿಂದ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಖನಿಜಾನ್ವೇಷಣಾ ಅರ್ಜಿ ಸಂಖ್ಯೆ 100 ಎಪಿಎಲ್ 95ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂವಿಜ್ಞಾನ ಇಲಾಖೆ,
ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:920 ಎಎಂಎಲ್ 07: 10–11/4020, ದಿನಾಂಕ:4ನೇ ಆಗಸ್ಟ್, 2010**

**ವಿಷಯ:** ಶ್ರೀ ನಾಯ್ಕರ ತೋಟಪ್ಪ ರವರು ದಿನಾಂಕ:28–06–2007ರಂದು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ದೇವಗಿರಿ ಗ್ರಾಮದ 100.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು & ಮ್ಯಾಂಗನೀಸ್ ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:920 ಎಎಂಎಲ್ 07/5289–90, ದಿನಾಂಕ 18–03–2010.

2. ಅರ್ಜಿದಾರರ ವಿವರಣೆ ದಿ:05–05–2010.

**ಪ್ರಸ್ತಾವನೆ:**

ಶ್ರೀ ನಾಯ್ಕರ ತೋಟಪ್ಪ ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು ದೇವಗಿರಿ ಗ್ರಾಮದ 100.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು & ಮ್ಯಾಂಗನೀಸ್ ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ: 920 ಎಎಂಎಲ್ 07 ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಮೆ:NMDC ರವರ ಚಾಲ್ತಿಯಲ್ಲಿರುವ ಗಣಿಗುತ್ತಿಗೆ ಪ್ರದೇಶಕ್ಕೆ ಅತಿವ್ಯಾಪ್ತಿಯಾಗುತ್ತಿದೆ. ಈ ಬಗ್ಗೆ ಉಲ್ಲೇಖಿತ ಸೂಚನಾ ಪತ್ರದಲ್ಲಿ ತಿಳಿಸಿ, 30 ದಿನಗಳೊಳಗಾಗಿ ವಿವರಣೆಯನ್ನು ನೀಡುವಂತೆ ಸೂಚಿಸಲಾಗಿತ್ತು. ಉಲ್ಲೇಖ(2)ರಲ್ಲಿ ಅರ್ಜಿದಾರರು ನೀಡಿರುವ ವಿವರಣೆಯಲ್ಲಿ, ತಾನು ಜನ್ಮದಾರಭ್ಯ ಅಂಗವಿಕಲನಾಗಿದ್ದು, ಈ ಬಗ್ಗೆ ವೈದ್ಯರ ದೃಢೀಕರಣವನ್ನು ಲಗತ್ತಿಸಿರುವುದಾಗಿಸಿರುತ್ತಾರೆ. ತಮಗೆ ಸದರಿ ಪ್ರದೇಶದ ಮಂಜೂರಾತಿ ನೀಡಿ, ಗಣಿಗಾರಿಕೆ ಮಾಡಲು ಅವಕಾಶ ಮಾಡಿಕೊಡುವಂತೆ ಕೋರಿರುತ್ತಾರೆ. ಆದರೆ, ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 920 ಎಎಂಎಲ್ 07ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ನಿರ್ದೇಶಕರು
ಗಣಿ ಮತ್ತು ಭೂವಿಜ್ಞಾನ ಇಲಾಖೆ,
ಬೆಂಗಳೂರು.

ಪಿ.ಆರ್–1217

**PROCEEDINGS OF THE DIRECTOR, DEPARTMENT OF MINES & GEOLOGY, BANGALORE**

**Sub:** Grant of mining lease in favour of Sri H.B.Patil in Mukanur village, Ranibennur taluk Haveri District over an area of 24.28Hects, for Moulding sand -reg.

**Read:** 1. Mining lease application No. 142 AML 2000 dated:29-11-2000.(RML 2137)

2. Grant Notification No. DMG:MLS:142 AML 2000: 2004-05:12510 dated 30-11-2004.

3. This Office notice no. ಗಭೂಇ:ಗಗುಶಾ /142 AML 2000/09-10/18738-39 dtd:22-03-2010.

**PREAMBLE:**

Sri H.B.Patil has filed an application for grant of mining lease, for Moulding sand in Mukanur village, Ranibennur taluk Haveri District over an area of 24.28Hects., Moulding sand. After considering all the facts grant renewal notification cited at reference (2) was accorded along with terms & conditions stipulated under rules of MCR 1960. The grantee should execute the mining lease deed within 6 months from the date of issue of notification as per rule 31 of MCR 1960 failing which the same will be revoked.

Even after, lapse of several years, the grantee has not executed the lease deeds by furnishing relevant documents required for execution and violated rule 31 of MCR 1960. Hence notice under reference (3) was issued and there is no response from the applicant.

Further the Senior Geologist , Haveri district his technical report as well as Sand analysis report dtd:25-02-2010 has stated that the sand available in the area in question is not moulding sand but ordinary sand.

In view of the above reasons, as the applicant has violated rule 31 of MCR 1960 and also as there is no moulding sand in the area, the lease cannot be renewed. Hence the following order,

**ORDER**

I, Sri M.E. Shivalinga Murthy, IAS, the Director of Mines and Geology, Bangalore, in exercise of powers delegated under Government Notification No.CI 3 MMN 95 dt.27-051995 & Notification No.CI 214 MMM 2006 dtd.9-02-2007 do hereby revoke the order granting the renewal of mining lease 142 AML 2000/2004-05/12510 dt:30-11-2004 in favour of Sri H.B.Patil, the reasons stated above under rule 31 of mineral concession rules 1960.

**DIRECTOR**

PR-1218

Department of Mines & Geology,
Bangalore.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ–3, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು–560 029**

**ಪ್ರಕರಣ ಸಂಖ್ಯೆ:ಸಿಡಬ್ಲ್ಯೂಸಿ:ಎಫ್‌ಸಿ/ಸಿಆರ್–22/10, ದಿನಾಂಕ:3ನೇ ಆಗಸ್ಟ್, 2010**

**ಅರ್ಜಿದಾರರು:**

1) ಶ್ರೀ ಆಂಜನಯ್ಯ,
ಶ್ರೀಮತಿ ದೇವಮ್ಮ,
ನರಬಂಡೆ ಫ್ವಿಲೇಜ್, ನವಲಕೋಲು ಪೋಸ್ಟ್,
ಮಾನ್ವಿ ತಾಲ್ಲೂಕು, ರಾಯಚೂರು ಜಿಲ್ಲೆ.

**ಪ್ರತಿವಾದಿಗಳು:**

1) ಬ್ರ್ಯಾಂಚ್ ಮ್ಯಾನೇಜರ್ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಇಂದಿರಾನಗರ, ಬೆಂಗಳೂರು.
2) ಮೆ॥ ಅಬ್ರಹಾಂ ಥಾಮಸ್ ಇಂಜಿನೀಯರ್ ಪ್ರೈ.ಲಿ., ಪ್ರೇಜರ್‌ಟೌನ್, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ಆಂಜನಯ್ಯ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಶ್ರೀಕಂಠ @ ಸಿರಿಯಪ್ಪ ಇವರು ಪ್ರತಿವಾದಿ 2 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದೇನೆಂದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ–3, ಬೆಂಗಳೂರು.

ಪಿ.ಆರ್.1213

**PROCEEDINGS OF THE DIRECTOR, DEPARTMENT OF MINES & GEOLOGY, BANGALORE**

**NOTIFICATION NO.DMG/AML/ADV/10-11, DATED:5TH AUGUST, 2010**

It is hereby informed for the mining public that the area noted below is available for re-grant under rule 59(1) of MCR 1960 as under:

5. This area is available for grant to the general public from the date of notification in the official gazette for a period of 30 days.

6. The applications will be received over this area from general public from the date of notification in the official gazette for a period of 30 days.

7. If the last day for receipt of application happens to be public holiday or general holiday, the application will be accepted on the next working day.

8. Any applications received after 30 days from the date of notification in official gazette days will not be considered.

The sketch of the area is available for verification at the office of the Director, Department of Mines and Geology, Khanija Bhavan, Race Course Road, Bangalore-01 during working hours on all working days.

The prescribed applications and the sketches of the notified area can be obtained from the office of the Director, Department of Mines and Geology, Khanija Bhavan, Race Course Road, Bangalore-01 on payment of prescribed fees.

The mining public should note the availability of the area published below is subject to the clearance from the Revenue Department, for mining activities and compliance of the provisions of the MM (D & R) Act 1957 and MCR 1960 and all other relevant acts and rules by the applicants. In case, the area is found to consists of forest lands, the clearance from the forest department under section 2 of the Forest (Conservation) Act 1980, for utilizing the area for non-forest activities should be obtained by the applicant.

Interested persons are advised to inspect the area, satisfy themselves, about the availability of mineral deposits and the present status of the land there, in before, making application for mining lease.

| Sl. No. | ML No. | Mineral | Extent | Sy.No. | Location |
|---|---|---|---|---|---|
| 1.<br>2. | 1886<br>1509/<br>1930 | China Clay ordinary & Yellow clay | 15.21 Acres<br>16.22 Acres<br>Total=31.49 Acres | 74, 77, 76, 84/19, 84/18, 80/8, 80/7 | Karalga Village<br>Khanapur Taluk,<br>Belgaum District. |

**DIRECTOR**
PR-1215
Department of Mines & Geology,
Bangalore.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ಉಪವಿಭಾಗ, ರಾಮನಗರ ರವರ ಸಮ್ಮುಖದಲ್ಲಿ**

**ವಿಷಯ:** ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ, ಇದರ ಹೆಸರಿನಲ್ಲಿದ್ದುದನ್ನು ವರ್ಗಾವಣೆ ಮಾಡುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ಸಸಸನಿರಾ–46/ ವ್ಯಾಜ್ಯ/05/2009–10 ದಿನಾಂಕ:16.06.2009.
2) ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಚನ್ನಪಟ್ಟಣ ತಾಲ್ಲೂಕು ರವರು ಸಹಕಾರ ಸಂಘಗಳ ನಿಯಮ 38ರಡಿ ದಿನಾಂಕ:01.06.2010.

**ಪ್ರಸ್ತಾವನೆ:**

ಶ್ರೀ ಜವರೇಗೌಡ ಬಿನ್ ಚಲುವೇಗೌಡ, ಮತ್ತು ಪುಟ್ಟಸ್ವಾಮಿ ಬಿನ್ ಚಲುವೇಗೌಡ, ಅರಳುಕುಪ್ಪೆದೊಡ್ಡಿ ಚನ್ನಪಟ್ಟಣ ತಾಲ್ಲೂಕು, ಇವರು ಕೃಷಿಯೇತರ ಯೋಜನೆಯಡಿ ಜಂಟಿ ಸಾಲ ಪಡೆದಿದ್ದು ಸುಸ್ತಿಯಾದ ಕಾರಣ ಇವರ ವಿರುದ್ಧ ಚನ್ನಪಟ್ಟಣ ತಾಲ್ಲೂಕು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತದವರು ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರಡಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ರಾಮನಗರ ಉಪವಿಭಾಗ, ರಾಮನಗರ ರವರ ಸಮ್ಮುಖದಲ್ಲಿ ಸಲ್ಲಿಸಲಾಗಿದ್ದ ದಾವೆ ಸಂಖ್ಯೆ: ಸಸಸನಿರಾ–46/ವ್ಯಾಜ್ಯ/05/2009–10ರಲ್ಲಿ ಹೊರಡಿಸಲಾಗಿದ್ದ ಆದೇಶದನ್ವಯ ಬಾಕಿ ಮೊತ್ತ ವಸೂಲಿಗಾಗಿ ಈ ಕಛೇರಿಯಲ್ಲಿ ವಸೂಲಾತಿ ಕ್ರಮವನ್ನು ಸಂಖ್ಯೆ:624/1999–2000 ಕ್ರಯವಿಟ್ಟಿದ್ದು ವಸೂಲಾತಿ ಅಧಿಕಾರಿಯು ದಿನಾಂಕ:11.01.2001, 09.05.2001 ಮತ್ತು 26.02.2009 ರಂದು ಬಹಿರಂಗ ಹರಾಜಿಗೆ ಗುರಿಪಡಿಸಲಾಗಿ ಹರಾಜಿನಲ್ಲಿ ಬಿಡ್ಡುದಾರರು ಬಾರದಿರುವುದರಿಂದ ಮಾರಾಟಾಧಿಕಾರಿಯವರು ನಿಯಮ 38ಎ (2)ರೀತ್ಯಾ ಸಲ್ಲಿಸಲಾಗಿದ್ದ ವರದಿಯನ್ನು ಆಧರಿಸಿ ಡಿಕ್ರಿ ಹೊಂದಲಾದ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ ಚನ್ನಪಟ್ಟಣ ಇವರ ಹೆಸರಿಗೆ ಸ್ಥಿರ ಸ್ವತ್ತನ್ನು ಉಲ್ಲೇಖ (1)ರ ಆದೇಶದಲ್ಲಿ ವರ್ಗಾಯಿಸಲಾಗಿತ್ತು.

